RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ– I | ಬೆಂಗಳೂರು, ಬುಧವಾರ, ಏಪ್ರಿಲ್ ೧೩, ೨೦೧೬ (ಚೈತ್ರ ೨೪, ಶಕ ವರ್ಷ ೧೯೩೮) | ನಂ. ೬೩೬ |
|---|---|---|
| Part– I | Bengaluru, Wednesday, April 13, 2016 (Chaitra 24, Shaka Varsha 1938) | No. 636 |

## ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು

**ವಿಷಯ:** ವಿಜಯಪುರ ಜಿಲ್ಲೆ, ಬಸವನಬಾಗೇವಾಡಿ ತಾಲ್ಲೂಕು, ಮನಗೂಳಿ ಪಟ್ಟಣ ಪಂಚಾಯತ್ ಸಾರ್ವತ್ರಿಕ ಚುನಾವಣೆ–2016.

**ಓದಲಾಗಿದೆ:** 1.ಆಯೋಗದ ಆದೇಶ ಸಂಖ್ಯೆ: ರಾಚುಆ:09:ಇಯುಬಿ:2016 ದಿ.31.03.2016.

2.ಜಿಲ್ಲಾಧಿಕಾರಿಗಳು, ವಿಜಯಪುರ ಜಿಲ್ಲೆ ಇವರ ಪತ್ರದ ಸಂಖ್ಯೆ:ಪ.ಪಂ.ಚುನಾವಣೆ/ಸಿಆರ್.03/2015–16 ದಿ.12.04.2016

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆಯೋಗದ ಆದೇಶದಲ್ಲಿ ಗ್ರಾಮಪಂಚಾಯಿತಿಗಳಿಂದ ಉನ್ನತೀಕರಿಸಲಾದ 53 ನಗರ ಸ್ಥಳೀಯ ಸಂಸ್ಥೆಗಳಿಗೆ ಸಾರ್ವತ್ರಿಕ ಚುನಾವಣೆಯನ್ನು ಹಾಗೂ ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ಪುರಸಭೆಯ ವಾರ್ಡ ನಂ.6ಕ್ಕೆ ಉಪ ಚುನಾವಣೆ ನಡೆಸಲು ವೇಳಾಪಟ್ಟಿ ನಿಗದಿಪಡಿಸಿ ಚುನಾವಣೆ ನಡೆಸಲು ಆದೇಶಿಸಿದೆ. ಸದರಿ ಆದೇಶದಂತೆ ವಿಜಯಪುರ ಜಿಲ್ಲೆಯ ಬಸವನಬಾಗೇವಾಡಿ ತಾಲ್ಲೂಕಿನ ಮನಗೂಳಿ ಪಟ್ಟಣ ಪಂಚಾಯಿತಿಯ ಎಲ್ಲಾ 16 ವಾರ್ಡ್‌ಗಳಿಗೂ ಚುನಾವಣೆ ನಡೆಸಲಾಗುತ್ತಿದೆ. ಸದರಿ ಚುನಾವಣಾ ವೇಳಾಪಟ್ಟಿಯಂತೆ ದಿ.05.04.2016ರಿಂದ ಚುನಾವಣಾ ಪ್ರಕ್ರಿಯೆ ಪ್ರಾರಂಭವಾಗಿದ್ದು ದಿ.12.04.2016ರಂದು ನಾಮಪತ್ರ ಸಲ್ಲಿಕೆಗೆ ಕೊನೆಯ ದಿನಾಂಕವಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಜಿಲ್ಲಾಧಿಕಾರಿಗಳು, ವಿಜಯಪುರ ಜಿಲ್ಲೆ ಇವರ ಪತ್ರದಲ್ಲಿ ಮನಗೂಳಿ ಪಟ್ಟಣ ಪಂಚಾಯಿತಿಯ ಚುನಾವಣೆ ಪ್ರಕ್ರಿಯೆ ನಡೆಯುತ್ತಿರುವ ಸಂದರ್ಭದಲ್ಲಿ ದಿ.12.04.2016ರಂದು ನಾಮಪತ್ರ ಸಲ್ಲಿಸಲು ಕೊನೆಯ ದಿನವಾಗಿತ್ತು. ಚುನಾವಣಾಧಿಕಾರಿಗಳು, ಅಂದು ನಾಮಪತ್ರ ಸಲ್ಲಿಕೆ ಅವಧಿ ಮುಕ್ತಾಯ ಸಮಯ ಅಂದರೆ ಮಧ್ಯಾಹ್ನ 3–00 ಗಂಟೆಯ ನಂತರ ಪ್ರಪತ್ರ–3ರಲ್ಲಿ ನಾಮಪತ್ರ ಸಲ್ಲಿಸಿರುವ ಅಭ್ಯರ್ಥಿಗಳ ಹೆಸರುಗಳನ್ನು ವಾರ್ಡುವಾರು ಬರೆದು ನಾಮಪತ್ರಗಳ ನೋಟೀಸನ್ನು ನೋಟೀಸ್ ಬೋರ್ಡಿನ ಮೇಲೆ ಡಕಾಯಿಸುವ ಪೂರ್ವದಲ್ಲಿ ಚುನಾವಣಾಧಿಕಾರಿಗಳಿಂದ ವಾರ್ಡ್‌ನಂ–9 ರಿಂದ 16ರ ವರೆಗಿನ ಸಲ್ಲಿಕೆಯಾಗಿರುವ ಎಲ್ಲಾ ನಾಮಪತ್ರಗಳ ಸಮೇತ ನಾಮಪತ್ರಗಳ ಜೊತೆಗೆ ಇರುವ ಎಲ್ಲಾ ದಾಖಲಾತಿಗಳನ್ನು ಸುಮಾರು 200 ರಿಂದ 300 ಜನ ಇದ್ದ ಗುಂಪು ಒತ್ತಾಯಪೂರ್ವಕವಾಗಿ ಕಸಿದುಕೊಂಡು ಹೋಗಿರುತ್ತಾರೆಂದು ತಿಳಿಸಿ, ಆ ಬಗ್ಗೆ ಪೋಲೀಸ್ ಠಾಣೆಯಲ್ಲಿ ದೂರು ದಾಖಲಾಗಿರುವುದಾಗಿ ತಿಳಿಸಿರುತ್ತಾರೆ. ಮುಂದುವರೆದು, ದಿ.13.04.2016ರಂದು ನಾಮಪತ್ರಗಳ ಪರಿಶೀಲನೆ ದಿನಾಂಕವಾಗಿದ್ದು ಸ್ವೀಕೃತವಾದ ನಾಮಪತ್ರಗಳು ಇಲ್ಲದೆ ಇರುವುದರಿಂದ ಪರಿಶೀಲನೆಗೆ ಅವಕಾಶವಿಲ್ಲದಂತಾಗಿ ಚುನಾವಣೆ ಪ್ರಕ್ರಿಯೆಯನ್ನು ಮುಂದುವರೆಸಲು ಸಾಧ್ಯವಿಲ್ಲವೆಂದು ತಿಳಿಸಿರುತ್ತಾರೆ. ವಾರ್ಡ್ 1 ರಿಂದ 8ರ ವರೆಗಿನ ವಾರ್ಡ್‌ಗಳಿಗೆ ಸಲ್ಲಿಸಿರುವ ನಾಮಪತ್ರಗಳು ಸುರಕ್ಷಿತವಾಗಿರುವುದಾಗಿಯೂ, ವಾರ್ಡ್–9 ರಿಂದ 16ರ ವರೆಗಿನ ವಾರ್ಡ್‌ಗಳಿಗೆ ಹೊಸದಾಗಿ ಚುನಾವಣಾ ವೇಳಾಪಟ್ಟಿಯನ್ನು ನಿಗದಿಪಡಿಸಿ ಅದರಂತೆ ಚುನಾವಣೆ ನಡೆಸುವ ಬಗ್ಗೆ ಕೋರಿರುತ್ತಾರೆ.

ಜಿಲ್ಲಾಧಿಕಾರಿಗಳು, ವಿಜಯಪುರ ಜಿಲ್ಲೆ ಇವರ ಸದರಿ ಕೋರಿಕೆಯ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ರಾಚುಆ:48:ಇಯುಬಿ:2016, ಬೆಂಗಳೂರು ದಿನಾಂಕ: 13.04.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಭಾರತ ಸಂವಿಧಾನದ ಅನುಚ್ಛೇದ 243ಜಡ್‌ಎ ಹಾಗೂ ಕರ್ನಾಟಕ ಮುನಿಸಿಪಾಲಿಟೀಸ್ (ಕೌನ್ಸಿಲರ್‌ಗಳ ಚುನಾವಣೆ) ನಿಯಮಗಳು, 1977ರ ನಿಯಮ 3(1)ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರದ ಮೇರೆಗೆ, ವಿಜಯಪುರ ಜಿಲ್ಲೆ, ಬಸವನಬಾಗೇವಾಡಿ ತಾಲ್ಲೂಕಿನ, ಮನಗೂಳಿ ಪಟ್ಟಣ ಪಂಚಾಯಿತಿಯ ವಾರ್ಡ್ ನಂ. 9 ರಿಂದ 16ರ ಕುರಿತಂತೆ ಇದುವರೆಗಿನ ಚುನಾವಣಾ ಪ್ರಕ್ರಿಯೆಯನ್ನು ರದ್ದುಪಡಿಸುತ್ತಾ ಸದರಿ ವಾರ್ಡಗಳಿಗೆ ಮಾತ್ರ ಹೊಸದಾಗಿ ಈ ಕೆಳಕಂಡಂತೆ ಚುನಾವಣಾ ವೇಳಾಪಟ್ಟಿಯನ್ನು ನಿಗದಿಪಡಿಸಿ ಆದೇಶಿಸಿದೆ.

**ಚುನಾವಣಾ ವೇಳಾ ಪಟ್ಟಿ**

| | | |
|---|---|---|
| 1 | ಜಿಲ್ಲಾಧಿಕಾರಿಗಳು ಚುನಾವಣಾ ಅಧಿಸೂಚನೆಯನ್ನು ಹೊರಡಿಸುವ ದಿನಾಂಕ ಮತ್ತು ದಿನ | 15–04–2016 (ಶುಕ್ರವಾರ) |
| 2 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 22–04–2016 (ಶುಕ್ರವಾರ) |
| 3 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 23–04–2016 (ಶನಿವಾರ) |
| 4 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 25–04–2016 (ಸೋಮವಾರ) |
| 5 | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನದ ಸಮಯ ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಘಂಟೆವರೆಗೆ) | 03–05–2016 (ಮಂಗಳವಾರ) |
| 6 | ಮರು ಮತದಾನ ಅಗತ್ಯವಿದ್ದಲ್ಲಿ , ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನದ ಸಮಯ ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಘಂಟೆವರೆಗೆ) | 04–05–2016 (ಬುಧವಾರ) |
| 7 | ಮತಗಳ ಎಣಿಕೆಯು ಬೆಳಿಗ್ಗೆ 8.00 ಘಂಟೆಯಿಂದ– | 05–05–2016 (ಗುರುವಾರ) |
| 8 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 05–05–2016 (ಗುರುವಾರ) |

ಮನಗೂಳಿ ಪಟ್ಟಣ ಪಂಚಾಯಿತಿಯ ವಾರ್ಡ ನಂ.9 ರಿಂದ 16ರ ವರೆಗೆ ಮಾತ್ರ ಹೊಸದಾಗಿ ನಿಗದಿಪಡಿಸಿರುವ ಚುನಾವಣಾ ವೇಳಾಪಟ್ಟಿಯಂತೆ ಚುನಾವಣಾ ಅಧಿಸೂಚನೆ ಹೊರಡಿಸುವುದು.

ಸದರಿ ವಾರ್ಡ್‌ಗಳಿಗೆ ಚುನಾವಣಾ ಪ್ರಕ್ರಿಯೆಯನ್ನು ರದ್ದುಪಡಿಸಿರುವ ಬಗ್ಗೆ ಹಾಗೂ ಹೊಸದಾಗಿ ನಿಗದಿಪಡಿಸಿರುವ ವೇಳಾಪಟ್ಟಿಯಂತೆ ನೋಟೀಸ್ ಅನ್ನು ಪಟ್ಟಣ ಪಂಚಾಯಿತಿಯ/ ಚುನಾವಣಾಧಿಕಾರಿಗಳ ಕಛೇರಿಯ ಚುನಾವಣಾ ಫಲಕದಲ್ಲಿ ಪ್ರಕಟಿಸುವಂತೆ ಚುನಾವಣಾಧಿಕಾರಿಗಳಿಗೆ ಸೂಚಿಸುವುದು. ಈ ಕುರಿತು ಪಟ್ಟಣ ಪಂಚಾಯಿತಿ ವ್ಯಾಪ್ತಿಯಲ್ಲಿ ಸಾಕಷ್ಟು ಪ್ರಚಾರ ನೀಡುವುದು.

**ಮನಗೂಳಿ ಪಟ್ಟಣ ಪಂಚಾಯಿತಿಯ 1 ರಿಂದ 8ರ ವರೆಗಿನ ವಾರ್ಡ್‌ಗಳಿಗೆ ಸಂಬಂಧಿಸಿದಂತೆ ಮತ ಎಣಿಕೆ ದಿನಾಂಕವನ್ನು ದಿನಾಂಕ.05.05.2016ಕ್ಕೆ ಮರುನಿಗದಿಪಡಿಸಿದೆ.** ಉಳಿದಂತೆ ಈ ವಾರ್ಡ್‌ಗಳ ಇತರೆ ಚುನಾವಣಾ ಪ್ರಕ್ರಿಯೆಗಳು ಆಯೋಗದ ಕ್ರ.ಸಂ.(1)ರಲ್ಲಿ ಓದಲಾದ ದಿ.31.03.2016ರ ಆದೇಶದಲ್ಲಿ ನಿಗದಿಪಡಿಸಿರುವ ವೇಳಾ ಪಟ್ಟಿಯಂತೆ ಮುಂದುವರೆಯುವುದು.

ಚುನಾವಣಾ ನೀತಿ ಸಂಹಿತೆಯು ದಿ.05.05.2016ರ ವರೆಗೆ ಸದರಿ ಪಟ್ಟಣ ಪಂಚಾಯಿತಿ ವ್ಯಾಪ್ತಿಯಲ್ಲಿ ಮುಂದುವರೆಯುವುದು.

ಆದೇಶಾನುಸಾರ

**ಕವಿತಾರಾಣಿ ಆರ್**

ಅಧೀನ ಕಾರ್ಯದರ್ಶಿ, ರಾಜ್ಯ ಚುನಾವಣಾ ಆಯೋಗ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 10 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ– ***IVA*** | ಬೆಂಗಳೂರು, ಶುಕ್ರವಾರ, ಏಪ್ರಿಲ್ ೧೫, ೨೦೧೬ (ಚೈತ್ರ ೨೬, ಶಕ ವರ್ಷ ೧೯೩೮) | ನಂ. ೬೩೭ |
| ***Part– IVA*** | ***Bengaluru, Friday, April 15, 2016 (Chaitra 26, Shaka Varsha 1938)*** | ***No. 637*** |


**FINANCE SECRETARIAT**

**NOTIFICATION**

**No. FD 02 PES 2015, Bangalore Dated: 15/04/2016**

Whereas the draft of the Karnataka Excise (Sale of Indian & Foreign Liquors) (Amendment) Rules, 2015 was published as required by sub-section (1) of section 71 of the Karnataka Excise Act, 1965 (Karnataka Act 21 of 1966) in Notification No. FD 02 PES 2015, dated: 14-12-2015 in Part-IV-A of the Karnataka Gazette (Extra ordinary) No. 1705, dated: 14-12-2015 inviting objections and suggestions from all persons likely to be effected within fifteen days from the date of its publication in the Official Gazette.

And, whereas the said Gazette was made available to the public on $14^{th}$ December 2015.

And, whereas objections and suggestions received in respect of the said draft have been considered by the State Government.

Now, therefore, in exercise of the powers conferred by section 71 of the Karnataka Excise Act 1965 (Karnataka Act 21 of 1966) the Government of Karnataka hereby makes the following rules, namely:-

**RULES**

**1**. **Title and commencement**:- (1) These rules may be called the Karnataka Excise (Sale of Indian & Foreign Liquors) (Amendment) Rules, 2016.

(2) They shall come into force from the date of their final publication in the official gazette.

**2. Amendment of Rule 3:-** In the Karnataka Excise (Sale of Indian and Foreign Liquors) Rules, 1968, in Rule 3 for sub-rule (4), the following shall be substituted, namely:-

"(4) The Agent, Secretary or Manager or any other person entrusted with the management of the business of the club shall apply and obtain licence in Form CL-4 from the Deputy Commissioner. The licensee under this clause may open up to four additional counters for serving liquor for the convenience of the members within the licensed premises with the approval of the Deputy Commissioner."

By Order and in the name of the Governor of Karnataka

**Venkatesh.G**
Under Secretary to Government,
Finance Department (Excise)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 1000 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– *IVA* | ಬೆಂಗಳೂರು, ಶುಕ್ರವಾರ, ಏಪ್ರಿಲ್ ೧೫, ೨೦೧೬ (ಚೈತ್ರ ೨೬, ಶಕ ವರ್ಷ ೧೯೩೮) | ನಂ. ೬೩೮ |
|---|---|---|
| *Part– IVA* | *Bengaluru, Friday, April 15, 2016 (Chaitra 26, Shaka Varsha 1938)* | *No. 638* |


**ಸಾರಿಗೆ ಸಚಿವಾಲಯ**

**ವಿಚಾರಣಾ ನೋಟಿಸ್**

**ಸಂಖ್ಯೆ: ಸಾರಿಇ 82 ಸಾಇಪ 2014, ಬೆಂಗಳೂರು, ದಿನಾಂಕ:15.04.2016.**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಾರಿಇ 94 ಸಾಇಪ 2010, ದಿನಾಂಕ: 13.05.2011ನ್ನು ಮಾರ್ಪಾಡುಗೊಳಿಸುವ ಸಂಬಂಧ, ಅಧಿಸೂಚನೆ ಸಂಖ್ಯೆ: ಸಾರಿಇ 82 ಸಾಇಪ 2014, ದಿನಾಂಕ: 07.11.2015ನ್ನು ಕರ್ನಾಟಕ ರಾಜ್ಯ ಪತ್ರ ವಿಶೇಷ ರಾಜ್ಯ ಪತ್ರಿಕೆಯಲ್ಲಿ ದಿನಾಂಕ: 09.11.2015ರಂದು ಪ್ರಕಟಿಸಿ ಬಾಧಿತರಿಂದ ಆಕ್ಷೇಪಣೆ/ ಸಲಹೆಗಳನ್ನು ಆಹ್ವಾನಿಸಲಾಗಿತ್ತು. ಈ ಸಂಬಂಧ, ಸ್ವೀಕೃತವಾಗಿರುವ ಆಕ್ಷೇಪಣೆ/ ಸಲಹೆಗಳನ್ನು ಆಲಿಸಲು ಶ್ರೀ ಪಿ.ರವಿಕುಮಾರ್, ಭಾ.ಆ.ಸೇ., ಅಪರ ಮುಖ್ಯ ಕಾರ್ಯದರ್ಶಿಗಳು, ಇಂಧನ ಇಲಾಖೆ ಇವರನ್ನು ವಿಚಾರಣಾ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸದರಿ ವಿಚಾರಣಾ ಪ್ರಾಧಿಕಾರಿಗಳು ದಿನಾಂಕ:02–05–2016 ರಂದು ಬೆಳಿಗ್ಗೆ 11.00 ಗಂಟೆಯಿಂದ ಕೊಠಡಿ ಸಂಖ್ಯೆ: 222, 2ನೇ ಮಹಡಿ, ವಿಕಾಸಸೌಧ, ಡಾ॥ ಬಿ.ಆರ್. ಅಂಬೇಡ್ಕರ್‌ವೀಧಿ, ಬೆಂಗಳೂರು ಇಲ್ಲಿ ಮೇಲ್ಕಂಡ ಕರಡು ಅಧಿಸೂಚನೆ ಸಂಬಂಧ ಸ್ವೀಕೃತವಾಗಿರುವ ಆಕ್ಷೇಪಣೆ/ಸಲಹೆಗಳನ್ನು ಆಲಿಸಲಿದ್ದಾರೆ. ಆದುದರಿಂದ ಸಂಬಂಧಪಟ್ಟವರು ಅಂದು ನಡೆಯಲಿರುವ ವಿಚಾರಣೆಗೆ ಹಾಜರಾಗುವಂತೆ ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

**ಕೆ.ಬೀರೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಾರಿಗೆ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 50 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ



| ಭಾಗ– *III* | ಬೆಂಗಳೂರು, ಶುಕ್ರವಾರ, ಏಪ್ರಿಲ್ ೧೫, ೨೦೧೬ (ಚೈತ್ರ ೨೬, ಶಕ ವರ್ಷ ೧೯೩೮) | ನಂ. ೬೩೯ |
|---|---|---|
| ***Part– III*** | ***Bengaluru, Friday, April 15, 2016 (Chaitra 26, Shaka Varsha 1938)*** | ***No. 639*** |



**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಗ್ರಾಅಪ/42/ಜಿಪಸ/2016, ಬೆಂಗಳೂರು, ದಿನಾಂಕ: 15/04/2016**

ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 177(2) ರಲ್ಲಿ ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆಗಳ ಮೀಸಲಾತಿ) ನಿಯಮಗಳು, 2005 ಮತ್ತು (ತಿದ್ದುಪಡಿ) ನಿಯಮಗಳು, 2016 ರಲ್ಲಿ ನಿಗದಿಪಡಿಸಿದಂತೆ, ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಾರ್ಚ್ 2016 ರಲ್ಲಿ ರಚಿತವಾಗಿರುವ ಜಿಲ್ಲಾ ಪಂಚಾಯತಿಗಳ ಐದು ವರ್ಷಗಳ ಅವಧಿಗೆ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳಿಗೆ ಮೀಸಲಾತಿಯನ್ನು ನಿಗಧಿಗೊಳಿಸಬೇಕಾಗಿದ್ದು, ಅದರಂತೆ ಜಿಲ್ಲಾ ಪಂಚಾಯತಿಗಳ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳಲ್ಲಿ ಅನುಸೂಚಿತ ಪಂಗಡ/ಅನುಸೂಚಿತ ಜಾತಿ/ಹಿಂದುಳಿದ ವರ್ಗಗಳು ಮತ್ತು ಮಹಿಳೆಯರಿಗೆ ಹಾಗೂ ಅದರೊಂದಿಗೆ ಮೀಸಲಿರಿಸದವರಿಗೆ ಹಂಚಿಕೆಯಾದ ಹುದ್ದೆಗಳ ವಿವರಗಳನ್ನು ದಿನಾಂಕ: 05–04–2016ರ ಇದೇ ಸಮಸಂಖ್ಯೆಯ ಅಧಿಸೂಚನೆಯಲ್ಲಿ ಪ್ರಕಟಿಸಲಾಗಿತ್ತು ಹಾಗೂ ರಾಜ್ಯ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 14676/2016 ಮತ್ತು 14677–14680/2016ರಲ್ಲಿ ದಿನಾಂಕ:23–03–2016ರಂದು ನೀಡಿದ ನಿರ್ದೇಶನದಂತೆ ಮೀಸಲಾತಿ ವಿವರಗಳನ್ನು ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮತ್ತು ಇಲಾಖಾ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗಿತ್ತು.

ವಿವಿಧ ಜಿಲ್ಲಾ ಪಂಚಾಯತಿ ವ್ಯಾಪ್ತಿಯ ಸಾರ್ವಜನಿಕರು ಸಲ್ಲಿಸಿದ ಆಕ್ಷೇಪಣೆ/ಮನವಿಗಳನ್ನು ಸರ್ಕಾರವು ನಿಯಮಾನುಸಾರ ಪರಿಶೀಲಿಸಿರುತ್ತದೆ. ಅದರಂತೆ ಜಿಲ್ಲಾ ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳಿಗೆ ಅನುಸೂಚಿತ ಪಂಗಡ/ಅನುಸೂಚಿತ ಜಾತಿ/ಹಿಂದುಳಿದ ವರ್ಗಗಳು ಮತ್ತು ಮಹಿಳೆಯರಿಗೆ ಹಾಗೂ ಅದರೊಂದಿಗೆ ಮೀಸಲಿರಿಸದವರಿಗೆ ಹಂಚಿಕೆಯಾದ ಪರಿಷ್ಕೃತ ವಿವರಗಳನ್ನು ಈ ಕೆಳಗೆ ನಿರ್ದಿಷ್ಟಪಡಿಸಲಾಗಿದೆ. ಅದರನ್ವಯ ದಿನಾಂಕ: 05–04–2016ರ ಅಧಿಸೂಚನೆಯನ್ನು ಪರಿಷ್ಕರಿಸಿ, ಅಂತಿಮ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ.

| ಕ್ರ.ಸಂ | ಜಿಲ್ಲಾ ಪಂಚಾಯತಿ ಹೆಸರು | ಅಧ್ಯಕ್ಷ ಸ್ಥಾನ ಮೀಸಲಾತಿ | ಉಪಾಧ್ಯಕ್ಷ ಸ್ಥಾನ ಮೀಸಲಾತಿ |
|---|---|---|---|
| 1 | ಬಾಗಲಕೋಟೆ | ಸಾಮಾನ್ಯ(ಮ) | ಹಿಂದುಳಿದ ವರ್ಗ(ಅ) |
| 2 | ಬೆಂಗಳೂರು ನಗರ | ಸಾಮಾನ್ಯ | ಪರಿಶಿಷ್ಟ ಜಾತಿ (ಮ) |
| 3 | ಬೆಂಗಳೂರು ಗ್ರಾಮಾಂತರ | ಹಿಂದುಳಿದ ವರ್ಗ(ಅ) | ಪರಿಶಿಷ್ಟ ಜಾತಿ (ಮ) |
| 4 | ಬೆಳಗಾವಿ | ಪರಿಶಿಷ್ಟ ಜಾತಿ (ಮ) | ಸಾಮಾನ್ಯ |
| 5 | ಬಳ್ಳಾರಿ | ಹಿಂದುಳಿದ ವರ್ಗ–ಬ (ಮ) | ಪರಿಶಿಷ್ಟ ಜಾತಿ |
| 6 | ಬೀದರ | ಪರಿಶಿಷ್ಟ ಪಂಗಡ (ಮ) | ಸಾಮಾನ್ಯ |

| ಕ್ರ.ಸಂ | ಜಿಲ್ಲಾ ಪಂಚಾಯತಿ ಹೆಸರು | ಅಧ್ಯಕ್ಷ ಸ್ಥಾನ ಮೀಸಲಾತಿ | ಉಪಾಧ್ಯಕ್ಷ ಸ್ಥಾನ ಮೀಸಲಾತಿ |
|---|---|---|---|
| 7 | ವಿಜಯಪುರ | ಹಿಂದುಳಿದ ವರ್ಗ–ಅ | ಸಾಮಾನ್ಯ |
| 8 | ಚಾಮರಾಜನಗರ | ಪರಿಶಿಷ್ಟ ಪಂಗಡ | ಸಾಮಾನ್ಯ |
| 9 | ಚಿಕ್ಕಬಳ್ಳಾಪುರ | ಸಾಮಾನ್ಯ | ಹಿಂದುಳಿದ ವರ್ಗ(ಅ) (ಮ) |
| 10 | ಚಿಕ್ಕಮಗಳೂರು | ಪರಿಶಿಷ್ಟ ಜಾತಿ(ಮ) | ಸಾಮಾನ್ಯ |
| 11 | ಚಿತ್ರದುರ್ಗ | ಸಾಮಾನ್ಯ(ಮ) | ಪರಿಶಿಷ್ಟ ಪಂಗಡ |
| 12 | ದಕ್ಷಿಣ ಕನ್ನಡ | ಪರಿಶಿಷ್ಟ ಜಾತಿ | ಸಾಮಾನ್ಯ(ಮ) |
| 13 | ದಾವಣಗೆರೆ | ಸಾಮಾನ್ಯ(ಮ) | ಪರಿಶಿಷ್ಟ ಜಾತಿ |
| 14 | ಧಾರವಾಡ | ಸಾಮಾನ್ಯ(ಮ) | ಹಿಂದುಳಿದ ವರ್ಗ(ಅ) |
| 15 | ಗದಗ | ಸಾಮಾನ್ಯ | ಸಾಮಾನ್ಯ(ಮ) |
| 16 | ಕಲಬುರಗಿ | ಸಾಮಾನ್ಯ(ಮ) | ಪರಿಶಿಷ್ಟ ಜಾತಿ (ಮ) |
| 17 | ಹಾಸನ | ಪರಿಶಿಷ್ಟ ಪಂಗಡ (ಮ) | ಸಾಮಾನ್ಯ |
| 18 | ಹಾವೇರಿ | ಸಾಮಾನ್ಯ | ಸಾಮಾನ್ಯ(ಮ) |
| 19 | ಕೊಡಗು | ಪರಿಶಿಷ್ಟ ಜಾತಿ | ಸಾಮಾನ್ಯ(ಮ) |
| 20 | ಕೋಲಾರ | ಸಾಮಾನ್ಯ | ಪರಿಶಿಷ್ಟ ಪಂಗಡ (ಮ) |
| 21 | ಕೊಪ್ಪಳ | ಸಾಮಾನ್ಯ | ಹಿಂದುಳಿದ ವರ್ಗ–(ಅ) (ಮ) |
| 22 | ಮಂಡ್ಯ | ಸಾಮಾನ್ಯ(ಮ) | ಪರಿಶಿಷ್ಟ ಪಂಗಡ (ಮ) |
| 23 | ಮೈಸೂರು | ಹಿಂದುಳಿದ ವರ್ಗ–ಅ(ಮ) | ಸಾಮಾನ್ಯ |
| 24 | ರಾಯಚೂರು | ಹಿಂದುಳಿದ ವರ್ಗ(ಅ) (ಮ) | ಸಾಮಾನ್ಯ |
| 25 | ರಾಮನಗರ | ಸಾಮಾನ್ಯ | ಸಾಮಾನ್ಯ(ಮ) |
| 26 | ಶಿವಮೊಗ್ಗ | ಸಾಮಾನ್ಯ(ಮ) | ಹಿಂದುಳಿದ ವರ್ಗ–(ಬ) (ಮ) |
| 27 | ತುಮಕೂರು | ಹಿಂದುಳಿದ ವರ್ಗ–(ಅ) | ಪರಿಶಿಷ್ಟ ಜಾತಿ |
| 28 | ಉತ್ತರ ಕನ್ನಡ | ಪರಿಶಿಷ್ಟ ಜಾತಿ (ಮ) | ಹಿಂದುಳಿದ ವರ್ಗ–(ಅ) |
| 29 | ಉಡುಪಿ | ಪರಿಶಿಷ್ಟ ಜಾತಿ | ಸಾಮಾನ್ಯ(ಮ) |
| 30 | ಯಾದಗಿರಿ | ಸಾಮಾನ್ಯ | ಸಾಮಾನ್ಯ(ಮ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಬಿ.ಥೋತ್ರೆ**
ಸರ್ಕಾರದ ಅಧೀನ ಕಾರ್ಯದರ್ಶಿ(ಜಿ.ಪಂ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ೫೦೦ ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ– *I* | ಬೆಂಗಳೂರು, ಶನಿವಾರ, ಏಪ್ರಿಲ್ ೧೬, ೨೦೧೬ (ಚೈತ್ರ ೨೭, ಶಕ ವರ್ಷ ೧೯೩೮) | ನಂ. ೬೪೦ |
|---|---|---|
| ***Part–I*** | ***Bengaluru, Saturday, April 16, 2016 (Chaitra 27, Shaka Varsha 1938)*** | ***No. 640*** |


**ಸಹಕಾರ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಬ್ಯಾಂಕಿಂಗೇತರ ಹಣಕಾಸು ಸಂಸ್ಥೆಗಳಿಗೆ ಕರ್ನಾಟಕ ಲೇವಾದೇವಿದಾರರ ಅಧಿನಿಯಮ 1961 ರಿಂದ ನೀಡಿರುವ ವಿನಾಯಿತಿಯನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ:**
1. ಸಂಖ್ಯೆ: ಸಿಒ 13 ಸಿಎಂಎಲ್ 2007, ದಿನಾಂಕ: 23.05.2007
2. ಸಂಖ್ಯೆ: ಸಿಒ 12 ಸಿಎಂಎಲ್ 2007, ದಿನಾಂಕ: 12.06.2007
3. ಸಂಖ್ಯೆ: ಸಿಒ 18 ಸಿಎಂಎಲ್ 2009, ದಿನಾಂಕ: 15.06.2010
4. ಸಂಖ್ಯೆ: ಸಿಒ 23 ಸಿಎಂಎಲ್ 2011, ದಿನಾಂಕ: 23.11.2011
5. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಎನ್ಎಂಎಲ್/ ವೈಎಂಸಿ/146/10–11, ದಿನಾಂಕ: 05.04.2016.

**ಪ್ರಸ್ತಾವನೆ :**

ಮೇಲೆ ಓದಲಾದ (1) ರಿಂದ (4)ರ ಸರ್ಕಾರದ ಆದೇಶಗಳಲ್ಲಿ ಕ್ರಮವಾಗಿ ಮಣಪ್ಪುರಂ ಫೈನಾನ್ಸ್ (ತಮಿಳುನಾಡು) ಪ್ರೈ.ಲಿ. ಕೊಯಮತ್ತೂರು, ಮಣಪ್ಪುರಂ ಜನರಲ್ ಫೈನಾನ್ಸ್ ಮತ್ತು ಲೀಸಿಂಗ್ ಲಿ. ತ್ರಿಶೂರ್, ಕೇರಳ, ಮುತ್ತೋಟ್ ಫೈನಾನ್ಸ್ ಲಿ., ಬೆಂಗಳೂರು ಮತ್ತು ಮುತ್ತೋಟ್ ಫಿನ್ ಕಾರ್ಪ್ ಲಿ., ಬೆಂಗಳೂರು ಇವರಿಗೆ ಕರ್ನಾಟಕ ಲೇವಾದೇವಿದಾರರ ಅಧಿನಿಯಮ 1961ರಡಿ ವಿನಾಯಿತಿ ನೀಡಿ ಆದೇಶಿಸಲಾಗಿದೆ.

ಮೇಲೆ ಓದಲಾದ (5)ರ ದಿನಾಂಕ:05.04.2016ರ ನಿಬಂಧಕರ ಪ್ರಸ್ತಾವೆಯಲ್ಲಿ, ಬ್ಯಾಂಕಿಂಗೇತರ ಹಣಕಾಸು ಸಂಸ್ಥೆಗಳು ಭಾರತೀಯ ರಿಸರ್ವ್ ಬ್ಯಾಂಕಿನ ಮಾರ್ಗಸೂಚಿಗಳನ್ನು ಮತ್ತು ಕರ್ನಾಟಕ ಲೇವಾದೇವಿ ಅಧಿನಿಯಮವನ್ನು ಉಲ್ಲಂಘಿಸಿ ಅಧಿಕ ಬಡ್ಡಿ ವಸೂಲಿ ಮಾಡುತ್ತಾ ಸಾರ್ವಜನಿಕರನ್ನು ವಂಚಿಸುತ್ತಿರುವ ಪ್ರಕರಣಗಳು ಬೆಳಕಿಗೆ ಬರುತ್ತಿದ್ದು, ಇದು ರೈತರ ಆತ್ಮಹತ್ಯೆಗೆ ಮುಖ್ಯ ಕಾರಣವಾಗಿರುತ್ತದೆಂದು ಸಾರ್ವಜನಿಕವಾಗಿ ಚರ್ಚಿತವಾಗುತ್ತಿದ್ದು ಮತ್ತು ವಿಧಾನಮಂಡಲದ ಉಭಯ ಸದನಗಳಲ್ಲೂ ಈ ವಿಷಯವು ಪ್ರಸ್ತಾಪವಾಗಿರುವುದಾಗಿ ತಿಳಿಸಿ, ಈ ಹಿನ್ನೆಲೆಯಲ್ಲಿ ಸಾರ್ವಜನಿಕರ ಹಿತದೃಷ್ಟಿಯಿಂದ ಮೇಲೆ ಓದಲಾದ (1) ರಿಂದ (4)ರಲ್ಲಿ ತಿಳಿಸಿರುವ ಸಂಸ್ಥೆಗಳಿಗೆ ಈ ಹಿಂದೆ ನೀಡಿದ್ದ ವಿನಾಯಿತಿಯನ್ನು ಹಿಂಪಡೆಯುವುದು ಸೂಕ್ತವೆಂದು, ಅದರಂತೆ ಹಿಂಪಡೆಯಲು ಸಹಕಾರ ಸಂಘಗಳ ನಿಬಂಧಕರು ಸರ್ಕಾರವನ್ನು ಕೋರಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ನಿಬಂಧಕರ ಪ್ರಸ್ತಾವೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 05 ಸಿಎಂಎಲ್ 2011, ಬೆಂಗಳೂರು, ದಿನಾಂಕ: 16.04.2016**

ಮಣಪ್ಪುರಂ ಫೈನಾನ್ಸ್ (ತಮಿಳುನಾಡು) ಪ್ರೈ.ಲಿ. ಕೊಯಮತ್ತೂರು, ಮಣಪ್ಪುರಂ ಜನರಲ್ ಫೈನಾನ್ಸ್ ಮತ್ತು ಲೀಸಿಂಗ್ ಲಿ. ತ್ರಿಶೂರ್, ಕೇರಳ, ಮುತ್ತೂಟ್ ಫೈನಾನ್ಸ್ ಲಿ., ಬೆಂಗಳೂರು ಮತ್ತು ಮುತ್ತೂಟ್ ಫಿನ್ ಕಾರ್ಪ್ ಲಿ., ಬೆಂಗಳೂರು ಈ ಸಂಸ್ಥೆಗಳಿಗೆ ಕರ್ನಾಟಕ ಲೇವಾದೇವಿದಾರರ ಅಧಿನಿಯಮ 1961ರ ಪ್ರಕರಣ 2(10)(iv)(ಬಿ)ರಡಿ ನೀಡಿರುವ ವಿನಾಯಿತಿ ಆದೇಶ

1. ಸಂಖ್ಯೆ: ಸಿಒ 13 ಸಿಎಂಎಲ್ 2007, ದಿನಾಂಕ: 23.05.2007
2. ಸಂಖ್ಯೆ: ಸಿಒ 12 ಸಿಎಂಎಲ್ 2007, ದಿನಾಂಕ: 12.06.2007
3. ಸಂಖ್ಯೆ: ಸಿಒ 18 ಸಿಎಂಎಲ್ 2009, ದಿನಾಂಕ: 15.06.2010 ಮತ್ತು
4. ಸಂಖ್ಯೆ: ಸಿಒ 23 ಸಿಎಂಎಲ್ 2011, ದಿನಾಂಕ: 23.11.2011

ಗಳಲ್ಲಿ ಹೊರಡಿಸಿರುವ ಸರ್ಕಾರಿ ಆದೇಶಗಳನ್ನು, ಭದ್ರತಾ ಠೇವಣಿ ಎಂದು ಸದರಿ ಸಂಸ್ಥೆಗಳು ಸರ್ಕಾರಕ್ಕೆ ಪಾವತಿಸಿರುವ ಮೊತ್ತವನ್ನು ಮುಟ್ಟುಗೋಲು ಹಾಕಿಕೊಳ್ಳುವುದರೊಂದಿಗೆ ಕರ್ನಾಟಕ ಜನರಲ್ ಕ್ಲಾಸಸ್ ಅಧಿನಿಯಮ 1899ರ ಪ್ರಕರಣ 21ರ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ರದ್ದುಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 100 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ– *I* | ಬೆಂಗಳೂರು, ಶನಿವಾರ, ಏಪ್ರಿಲ್ ೧೬, ೨೦೧೬ (ಚೈತ್ರ ೨೭, ಶಕ ವರ್ಷ ೧೯೩೮) | ನಂ. ೬೪೧ |
|---|---|---|
| ***Part–I*** | ***Bengaluru, Saturday, April 16, 2016 (Chaitra 27, Shaka Varsha 1938)*** | ***No. 641*** |


**ಶಿಕ್ಷಣ ಸಚಿವಾಲಯ**
**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:–** ಕರ್ನಾಟಕ ರಾಜ್ಯ ಸರ್ಕಾರಿ / ಅನುದಾನಿತ ಪ್ರೌಢಶಾಲಾ ಶಿಕ್ಷಕರುಗಳಿಗೆ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ನೀಡುವ ಬಗ್ಗೆ.

**ಉಲ್ಲೇಖ:–** 1) ಶ್ರೀ ಕುಮಾರ್ ನಾಯಕ್ ಅಂದಿನ ಸರ್ಕಾರದ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಇವರ ನೇತೃತ್ವದ ಸಮಿತಿಯ ವರದಿ.

2) ಸರ್ಕಾರದ ಆದೇಶ ಸಂಖ್ಯೆ:ಇಡಿ 264 ಎಸ್ಎಲ್ಬಿ 2012 ದಿನಾಂಕ:09–05–2012.

**ಪ್ರಸ್ತಾವನೆ:–**

ರಾಜ್ಯದಲ್ಲಿನ ಸರ್ಕಾರಿ / ಅನುದಾನಿತ ಪ್ರೌಢಶಾಲಾ ಶಿಕ್ಷಕರುಗಳಿಗೆ ಶ್ರೀ ಕುಮಾರ್ ನಾಯಕ್ ಅಂದಿನ ಸರ್ಕಾರದ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಇವರ ಸಮಿತಿಯ ವರದಿಯಲ್ಲಿನ ಶಿಫಾರಸ್ಸಿನ್ವಯ ವೇತನ ಪರಿಷ್ಕರಣೆ ಮತ್ತು ಇತರೆ ಆರ್ಥಿಕ ಸೌಲಭ್ಯಗಳನ್ನು ಅನುಷ್ಠಾನಗೊಳಿಸುವಂತೆ ಕೋರುತ್ತಿದ್ದಾರೆ. ಈ ವರದಿಯನ್ನು ಅಧಿಕಾರಿ ವೇತನ ಸಮಿತಿಯು 2011ರಲ್ಲಿ ಪರಿಗಣಿಸಿದ್ದು, ವರದಿಯಲ್ಲಿನ ಶಿಫಾರಸ್ಸುಗಳನ್ನು ಅಧಿಕಾರಿ ವೇತನ ಸಮಿತಿಯು ಒಪ್ಪಿಕೊಂಡಿರುವುದಿಲ್ಲ.

ಮೇಲ್ಕಂಡ ಶಿಫಾರಸ್ಸಿನನ್ವಯ ಮೇಲೆ(2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ:09–05–2012ರಲ್ಲಿ ಸರ್ಕಾರಿ / ಅನುದಾನಿತ ಪ್ರೌಢಶಾಲಾ ಶಿಕ್ಷಕರುಗಳಿಗೆ ನೀಡಲಾಗುತ್ತಿರುವ ವಿಶೇಷ ವೇತನ ಭತ್ಯೆ ರೂ.200.00ಗಳನ್ನು ರೂ.400.00ಗಳಿಗೆ ಹೆಚ್ಚಿಸಿ ಆದೇಶಿಸಲಾಗಿದೆ.

ಸರ್ಕಾರಿ / ಅನುದಾನಿತ ಪ್ರೌಢಶಾಲಾ ಶಿಕ್ಷಕರುಗಳಿಗೆ ರೂ.400.00ಗಳ ವಿಶೇಷ ವೇತನವನ್ನು ಮಂಜೂರು ಮಾಡಿದ್ದರೂ ಸಹ ಇತರ ಬೇಡಿಕೆಗಳನ್ನು ಪರಿಗಣಿಸುವಂತೆ ಸತತವಾಗಿ ಕೋರಿಕೆ ಸಲ್ಲಿಸುತ್ತಿದ್ದಾರೆ.

ಈ ಕುರಿತು ಸರ್ಕಾರದ ಮಟ್ಟದಲ್ಲಿ ವಿವಿಧ ಹಂತಗಳಲ್ಲಿ ಸಂಬಂಧಿಸಿದ ಇಲಾಖೆಯ ಅಧಿಕಾರಿಗಳೊಂದಿಗೆ ಸಭೆ ನಡೆಸಲಾಯಿತು. ಅಂತಿಮವಾಗಿ ದಿನಾಂಕ:13–04–2016ರಂದು ವಿವಿಧ ಇಲಾಖೆಗಳ ಅಧಿಕಾರಿಗಳೊಂದಿಗೆ ನಡೆಸಿದ ಉನ್ನತ ಮಟ್ಟದ ಸಭೆಯಲ್ಲಿ ಕೂಲಂಕಷವಾಗಿ ಚರ್ಚಿಸಿ, ಈ ಕೆಳಕಂಡಂತೆ ಅಂತಿಮ ತೀರ್ಮಾನ ತೆಗೆದುಕೊಳ್ಳಲಾಯಿತು.

1. ಸರ್ಕಾರಿ / ಅನುದಾನಿತ ಪ್ರೌಢಶಾಲಾ ಶಿಕ್ಷಕರುಗಳಿಗೆ ಮತ್ತು ಮುಖ್ಯ ಶಿಕ್ಷಕರಿಗೆ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ಮಂಜೂರು ಮಾಡಲು;
2. ಸರ್ಕಾರಿ / ಅನುದಾನಿತ ಪ್ರೌಢಶಾಲಾ ಶಿಕ್ಷಕರುಗಳಿಗೆ ಪ್ರಸ್ತುತ ನೀಡುತ್ತಿರುವ ರೂ.400/–ಗಳ ವಿಶೇಷ ಭತ್ಯೆಯನ್ನು ಮುಂದುವರೆಸುವುದು;

ದಿನಾಂಕ:01.08.2008ರಂದು ಅಥವಾ ನಂತರ ನೇಮಕಾತಿ ಹೊಂದಿದ ಸರ್ಕಾರಿ / ಅನುದಾನಿತ ಪ್ರೌಢಶಾಲಾ ಶಿಕ್ಷಕರುಗಳಿಗೆ ರೂ.400/–ಗಳ ವಿಶೇಷ ಭತ್ಯೆಯ ಸೌಲಭ್ಯವನ್ನು ವಿಸ್ತರಿಸಲು ಕೋರಿರುವ ಬಗ್ಗೆ ಪ್ರಸಕ್ತ ಸಾಲಿನಲ್ಲಿ ಪರಿಶೀಲಿಸಲಾಗುವುದು.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ / ಅನುದಾನಿತ ಪ್ರೌಢಶಾಲಾ ಶಿಕ್ಷಕರುಗಳ ಸಂಘದ ಬೇಡಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 78 ಎಸ್‌ಎಲ್‌ಬಿ 2016, ಬೆಂಗಳೂರು, ದಿನಾಂಕ: 15.04.2016**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ / ಅನುದಾನಿತ ಪ್ರೌಢಶಾಲಾ ಶಿಕ್ಷಕರುಗಳಿಗೆ ಮತ್ತು ಮುಖ್ಯ ಶಿಕ್ಷಕರುಗಳಿಗೆ ಈ ಕೆಳಕಂಡ ಸೌಲಭ್ಯಗಳನ್ನು ವಿಸ್ತರಿಸಲು ಸರ್ಕಾರವು ಹರ್ಷಿಸುತ್ತದೆ.

1. ಜೂನ್ 2016ರಂದು ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ / ಅನುದಾನಿತ ಪ್ರೌಢಶಾಲಾ ಶಿಕ್ಷಕರು ಮತ್ತು ಮುಖ್ಯ ಶಿಕ್ಷಕರುಗಳಿಗೆ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ಮಂಜೂರು ಮಾಡಲಾಗಿದೆ.
2. ದಿನಾಂಕ:01.08.2008ರ ಪೂರ್ವದಲ್ಲಿ ಸರ್ಕಾರಿ / ಅನುದಾನಿತ ಪ್ರೌಢಶಾಲೆಯಲ್ಲಿ ನೇಮಕಾತಿಗೊಂಡು ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರುಗಳಿಗೆ ನೀಡಲಾಗುತ್ತಿರುವ ರೂ.400/–ಗಳ ವಿಶೇಷ ಭತ್ಯೆಯನ್ನು ಮುಂದುವರೆಸಲಾಗಿದೆ.
3. ತಮ್ಮ ವೇತನ ಶ್ರೇಣಿ ಅಂತಿಮ ಹಂತವನ್ನು ತಲುಪಿರುವ ಮುಖ್ಯ ಶಿಕ್ಷಕರು ಹಾಗೂ ಪ್ರೌಢಶಾಲಾ ಶಿಕ್ಷಕರುಗಳು ಮೇಲಿನಂತೆ ಮಂಜೂರು ಮಾಡಿರುವ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಮೇಲಿನ ಸೌಲಭ್ಯಗಳು ದಿನಾಂಕ:01.06.2016ರಿಂದ ಅಂದರೆ, 2016ರ ಜೂನ್ ತಿಂಗಳ ವೇತನದಿಂದ ಜಾರಿಗೆ ಬರುತ್ತದೆ.
5. ಆರ್ಥಿಕ ಹೊರೆಯನ್ನು ಒಳಗೊಂಡಿರದ ಸಂಘದ ಇತರ ಬೇಡಿಕೆಗಳನ್ನು ಶಿಕ್ಷಣ ಇಲಾಖೆಯು ಪರಿಶೀಲಿಸಲಿದೆ.
6. ಆರ್ಥಿಕ ಹೊರೆಯನ್ನು ಒಳಗೊಂಡಿರುವ ಸಂಘದ ಬೇಡಿಕೆಗಳನ್ನು ಮುಂದಿನ ವೇತನ ಸಮಿತಿ/ವೇತನ ಆಯೋಗದ ಮುಂದೆ ಮಂಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಸ್. ಹೊನ್ನೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಪ್ರೌಢಶಿಕ್ಷಣ).

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 500 ಪ್ರತಿಗಳು

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– IVA | ಬೆಂಗಳೂರು, ಶನಿವಾರ, ಏಪ್ರಿಲ್ ೧೬, ೨೦೧೬ (ಚೈತ್ರ ೨೭, ಶಕ ವರ್ಷ ೧೯೩೮) | ನಂ. ೬೪೨ |
|---|---|---|
| Part–IVA | Bengaluru, Saturday, April 16, 2016 (Chaitra 27, Shaka Varsha 1938) | No. 642 |

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಗ್ರಾಅಪ 127 ಜಿಪಸ 2016, ದಿನಾಂಕ: 16–04–2016**

**ಕರ್ನಾಟಕ ಪಂಚಾಯತ್ ರಾಜ್ (ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಚುನಾವಣೆ) (ತಿದ್ದುಪಡಿ) ನಿಯಮಗಳು 2016**

ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 (1993ರ ಕರ್ನಾಟಕ ಅಧಿನಿಯಮ ಸಂಖ್ಯೆ 14)ರ ಪ್ರಕರಣ 136ಬಿ ಮತ್ತು 138 ಯೊಡನೆ ಓದಿಕೊಂಡಂತೆ, ಪ್ರಕರಣ 311 ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಕರ್ನಾಟಕ ಪಂಚಾಯತ್ ರಾಜ್ (ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ) ನಿಯಮಗಳು, 1994ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಕೆಳಕಂಡ ಕರಡು ತಿದ್ದುಪಡಿ ನಿಯಮಗಳನ್ನು ಸದರಿ ಅಧಿನಿಯಮದ 311ನೇ ಪ್ರಕರಣದ ಉಪ ಪ್ರಕರಣ (1)ರ ಅಡಿಯಲ್ಲಿ ಅಗತ್ಯಪಡಿಸಲಾದಂತೆ, ಅದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ ಮತ್ತು ಸದರಿ ನಿಯಮಗಳ ಕರಡನ್ನು ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ 15 ದಿನಗಳ ನಂತರ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ಸೂಚಿಸಲಾಗಿದೆ.

ಮೇಲೆ ನಿರ್ದಿಷ್ಟಪಡಿಸಿದ ಅವಧಿಯು ಮುಕ್ತಾಯವಾಗುವುದಕ್ಕೆ ಮೊದಲು ಕರಡು ನಿಯಮಗಳಿಗೆ ಸಂಬಂಧಿಸಿದಂತೆ, ಯಾವೊಬ್ಬ ವ್ಯಕ್ತಿಯಿಂದ ರಾಜ್ಯ ಸರ್ಕಾರವು ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಅಥವಾ ಸಲಹೆಯನ್ನು ರಾಜ್ಯ ಸರ್ಕಾರವು ಪರಿಗಣಿಸುವುದು, ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, 3ನೇ ಹಂತ, 3ನೇ ಮಹಡಿ, ಬಹುಮಹಡಿಗಳ ಕಟ್ಟಡ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು–560001 ಇವರಿಗೆ ಕಳಹಿಸಬಹುದಾಗಿದೆ.

**ಕರಡು ನಿಯಮಗಳು**

**1. ಹೆಸರು ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ಪಂಚಾಯತ್ ರಾಜ್ (ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ) (ತಿದ್ದುಪಡಿ) ನಿಯಮಗಳು, 2016 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಕರ್ನಾಟಕ ರಾಜ್ಯಪತ್ರದಲ್ಲಿ ಅಂತಿಮವಾಗಿ ಪ್ರಕಟಿತವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ನಿಯಮ 1ರ ತಿದ್ದುಪಡಿ.–** ಕರ್ನಾಟಕ ಪಂಚಾಯತ್ ರಾಜ್ (ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ) ನಿಯಮಗಳು, 1994 (ಇಲ್ಲಿ ಇನ್ನು ಮುಂದೆ ಮೂಲ ನಿಯಮಗಳು ಎಂದು ಉಲ್ಲೇಖಿಸಲಾಗುವುದು)ರ ನಿಯಮ 1 ರ, ಉಪ ನಿಯಮ (1)ರಲ್ಲಿ, "ಕರ್ನಾಟಕ ಪಂಚಾಯತ್ ರಾಜ್ (ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ)" ಎಂಬ ಪದಗಳಿಗೆ "ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ (ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ)" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**3. ನಿಯಮ 2ರ ತಿದ್ದುಪಡಿ.–** ಮೂಲ ನಿಯಮಗಳ ನಿಯಮ 2ರ ಖಂಡ (ಎ)ಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಎ) "ಅಧಿನಿಯಮ" ಎಂದರೆ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ 1993, (1993ರ ಕರ್ನಾಟಕ ಅಧಿನಿಯಮ ಸಂಖ್ಯೆ 14);"

**4. ನಿಯಮ 3ಬಿಎ ಸೇರಿಸುವುದು.–** ಮೂಲ ನಿಯಮಗಳ, ನಿಯಮ 3ಬಿಯ ನಂತರ ಈ ಕೆಳಕಂಡ ನಿಯಮವನ್ನು ಸೇರಿಸತಕ್ಕದ್ದು ಅಂದರೆ,–

**"3ಬಿಎ ವಿಪ್ ಜಾರಿ ಮಾಡುವ ವಿಧಾನ.–** (1) ರಾಜಕೀಯ ಪಕ್ಷಗಳು ತಮ್ಮ ಪಕ್ಷದ ತಾಲ್ಲೂಕು ಪಂಚಾಯತಿಗಳ ಸದಸ್ಯರಿಗೆ ಅಥವಾ ಸದಸ್ಯನಿಗೆ ವಿಪ್ ಜಾರಿಗೊಳಿಸಲು ಉದ್ದೇಶಿಸಿದ್ದಲ್ಲಿ, ಆ ವಿಪ್‌ನ್ನು ಜಾರಿಗೊಳಿಸುವುದಲ್ಲದೇ ವಿಪ್ ಜಾರಿಗೊಳಿಸುವುದನ್ನು ನಿಶ್ಚಿತಗೊಳಿಸುವುದಕ್ಕಾಗಿ ವಿಪ್‌ನ ಪ್ರತಿಯನ್ನು ಚುನಾವಣಾ ಆಯೋಗಕ್ಕೆ ನೀಡತಕ್ಕದ್ದು. ಮತದಾನ ನಡೆಯುವ ದಿನಾಂಕದಂದು ಅಥವಾ ದಿನಾಂಕಗಳಲ್ಲಿ ಮತದಾನ ನಡೆಯುವ ಸ್ಥಳದ ಹೊರಗೆ ಚುನಾವಣಾ ಆಯೋಗವು ತನ್ನ ಕೇಂದ್ರವನ್ನು ಸ್ಥಾಪಿಸತಕ್ಕದ್ದು. ಸದರಿ ಕೇಂದ್ರದಲ್ಲಿ ತಾಲ್ಲೂಕು ಪಂಚಾಯತ್ ಸದಸ್ಯನಿಗೆ ಹಾಜರಾತಿ ತೆಗೆದುಕೊಳ್ಳುವುದರ ಜೊತೆಗೆ ಈ ಕೆಳಕಂಡ ಮಾಹಿತಿಯನ್ನು ಪ್ರತಿ ತಾಲ್ಲೂಕು ಪಂಚಾಯತ್ ಸದಸ್ಯನಿಂದ ಪಡೆಯತಕ್ಕದ್ದು. ಅಂದರೆ.–

| ಕ್ರಮ ಸಂಖ್ಯೆ | ವಿವರ | |
|---|---|---|
| 01 | ಸದಸ್ಯರ ಹೆಸರು ಮತ್ತು ವಿಳಾಸ | |
| 02 | ಸದಸ್ಯನು ಸೇರಿರುವ ರಾಜಕೀಯ ಪಕ್ಷವು ಸದಸ್ಯನಿಗೆ ವಿಪ್ ಜಾರಿ ಮಾಡಿದೆಯೇ? | ರಾಜಕೀಯ ಪಕ್ಷದ ಹೆಸರು :<br>ವಿಪ್ ಜಾರಿ ಮಾಡಿದೆಯೇ: |
| 03 | ಜಾರಿ ಮಾಡಿದ್ದಲ್ಲಿ ಸದಸ್ಯರ ಗಮನಕ್ಕೆ ಬಂದಿದೆಯೇ? | ಹೌದು ಅಥವಾ ಇಲ್ಲ |
| 04 | ಬಂದಿಲ್ಲದಿದ್ದಲ್ಲಿ, ಈಗ ವಿಪ್ ಪಡೆಯಲು ಇಚ್ಛಿಸಿದ್ದಾರೆಯೇ? | ಹೌದು ಅಥವಾ ಇಲ್ಲ |
| 05 | ವಿಪ್ ಪಡೆದಿದ್ದಕ್ಕೆ ಸ್ವೀಕೃತಿ (ಸದಸ್ಯರ ಸಹಿಯೊಂದಿಗೆ) | |
| 06 | ವಿಪ್ ನಿರಾಕರಿಸಲಾಗಿದೆಯೇ? | |

ಚುನಾವಣಾ ಆಯೋಗದಿಂದ ನಿರ್ದಿಷ್ಟಪಡಿಸಿದ ಅಧಿಕಾರಿಯ ಸಹಿ

(2) ವಿಪ್ ಪಡೆಯಲು ನಿರಾಕರಿಸಿದರೆ ಅಥವಾ ಉಲ್ಲಂಘಿಸಿದರೆ ಅಂತಹ ಮಾಹಿತಿಯನ್ನು ಚುನಾವಣಾ ಆಯೋಗದ ಕೇಂದ್ರದ ಅಧಿಕಾರಿಯು ಚುನಾವಣಾ ಆಯೋಗಕ್ಕೆ ಘಟನೆ ನಡೆದ ಕೂಡಲೇ ವರದಿ ನೀಡತಕ್ಕದ್ದು.

(3) ಚುನಾವಣಾ ಆಯೋಗವು ಉಪನಿಯಮ (2) ರಲ್ಲಿ ಮಾಹಿತಿಯನ್ನು ಸ್ವೀಕರಿಸಿದ ನಂತರ ಸಾಧ್ಯವಾದಷ್ಟು ಬೇಗನೆ ಪ್ರಕರಣ 175ಬಿ ರನ್ವಯ ಕ್ರಮ ತೆಗೆದುಕೊಳ್ಳತಕ್ಕದ್ದು.

(4) ಚುನಾವಣಾ ಪ್ರಕ್ರಿಯೆಯನ್ನು ವಿಡಿಯೋ ಗ್ರಾಫ್ ಮಾಡತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಬಿ. ಧೋತ್ರೆ**
ಅಧೀನ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ೫೦೦ ಪ್ರತಿಗಳು**

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ– *IVA* | ಬೆಂಗಳೂರು, ಶನಿವಾರ, ಏಪ್ರಿಲ್ ೧೬, ೨೦೧೬ (ಚೈತ್ರ ೨೭, ಶಕ ವರ್ಷ ೧೯೩೮) | ನಂ. ೬೪೩ |
| ***Part–IVA*** | ***Bengaluru, Saturday, April 16, 2016 (Chaitra 27, Shaka Varsha 1938)*** | ***No. 643*** |


**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಗ್ರಾಅಪ 128 ಜಿಪಸ 2016, ದಿನಾಂಕ: 16–04–2016**

**ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಪಂಚಾಯತಿಯ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಚುನಾವಣೆ) (ತಿದ್ದುಪಡಿ) ನಿಯಮಗಳು 2016**

ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 (1993ರ ಕರ್ನಾಟಕ ಅಧಿನಿಯಮ ಸಂಖ್ಯೆ 14)ರ ಪ್ರಕರಣ 175ಬಿ ಮತ್ತು 177 ಯೊಡನೆ ಓದಿಕೊಂಡಂತೆ, ಪ್ರಕರಣ 311 ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಪಂಚಾಯತಿಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ) ನಿಯಮಗಳು, 1994ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಕೆಳಕಂಡ ಕರಡು ತಿದ್ದುಪಡಿ ನಿಯಮಗಳನ್ನು ಸದರಿ ಅಧಿನಿಯಮದ 311ನೇ ಪ್ರಕರಣದ ಉಪ ಪ್ರಕರಣ (1)ರ ಅಡಿಯಲ್ಲಿ ಅಗತ್ಯಪಡಿಸಲಾದಂತೆ, ಅದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ ಮತ್ತು ಸದರಿ ನಿಯಮಗಳ ಕರಡನ್ನು ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ 15 ದಿನಗಳ ನಂತರ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ಸೂಚಿಸಲಾಗಿದೆ.

ಮೇಲೆ ನಿರ್ದಿಷ್ಟಪಡಿಸಿದ ಅವಧಿಯು ಮುಕ್ತಾಯವಾಗುವುದಕ್ಕೆ ಮೊದಲು ಕರಡು ನಿಯಮಗಳಿಗೆ ಸಂಬಂಧಿಸಿದಂತೆ, ಯಾವೊಬ್ಬ ವ್ಯಕ್ತಿಯಿಂದ ರಾಜ್ಯ ಸರ್ಕಾರವು ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಅಥವಾ ಸಲಹೆಯನ್ನು ರಾಜ್ಯ ಸರ್ಕಾರವು ಪರಿಗಣಿಸುವುದು, ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, 3ನೇ ಹಂತ, 3ನೇ ಮಹಡಿ, ಬಹುಮಹಡಿಗಳ ಕಟ್ಟಡ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು–560001 ಇವರಿಗೆ ಕಳಹಿಸಬಹುದಾಗಿದೆ.

**ಕರಡು ನಿಯಮಗಳು**

**1. ಹೆಸರು ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಪಂಚಾಯತಿಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ) (ತಿದ್ದುಪಡಿ) ನಿಯಮಗಳು, 2016 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಕರ್ನಾಟಕ ರಾಜ್ಯಪತ್ರದಲ್ಲಿ ಅಂತಿಮವಾಗಿ ಪ್ರಕಟಿತವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ನಿಯಮ 1ರ ತಿದ್ದುಪಡಿ.–** ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಪಂಚಾಯತಿಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ) ನಿಯಮಗಳು, 1994 (ಇಲ್ಲಿ ಇನ್ನು ಮುಂದೆ ಮೂಲ ನಿಯಮಗಳು ಎಂದು ಉಲ್ಲೇಖಿಸಲಾಗುವುದು)ರ ನಿಯಮ 1 ರ, ಉಪ ನಿಯಮ (1)ರಲ್ಲಿ, "ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಪಂಚಾಯತಿಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ)" ಎಂಬ ಪದಗಳಿಗೆ "ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ (ಜಿಲ್ಲಾ ಪಂಚಾಯತಿಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ)" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**3. ನಿಯಮ 2ರ ತಿದ್ದುಪಡಿ.–** ಮೂಲ ನಿಯಮಗಳ ನಿಯಮ 2ರ ಖಂಡ (ಎ)ಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಎ) "ಅಧಿನಿಯಮ" ಎಂದರೆ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ 1993, (1993ರ ಕರ್ನಾಟಕ ಅಧಿನಿಯಮ ಸಂಖ್ಯೆ 14);"

**4. ನಿಯಮ 3ಬಿಎ ಸೇರಿಸುವುದು.–** ಮೂಲ ನಿಯಮಗಳ, ನಿಯಮ 3ಬಿಯ ನಂತರ ಈ ಕೆಳಕಂಡ ನಿಯಮವನ್ನು ಸೇರಿಸತಕ್ಕದ್ದು ಅಂದರೆ,–

**"3ಬಿಎ ವಿಪ್ ಜಾರಿ ಮಾಡುವ ವಿಧಾನ.–** (1) ರಾಜಕೀಯ ಪಕ್ಷಗಳು ತಮ್ಮ ಪಕ್ಷದ ಜಿಲ್ಲಾ ಪಂಚಾಯತ್ ಸದಸ್ಯರಿಗೆ ಅಥವಾ ಸದಸ್ಯನಿಗೆ ವಿಪ್ ಜಾರಿಗೊಳಿಸಲು ಉದ್ದೇಶಿಸಿದ್ದಲ್ಲಿ, ಆ ವಿಪ್‌ನ್ನು ಜಾರಿಗೊಳಿಸುವುದಲ್ಲದೇ ವಿಪ್ ಜಾರಿಗೊಳಿಸುವುದನ್ನು ನಿಶ್ಚಿತಗೊಳಿಸುವುದಕ್ಕಾಗಿ ವಿಪ್‌ನ ಪ್ರತಿಯನ್ನು ಚುನಾವಣಾ ಆಯೋಗಕ್ಕೆ ನೀಡತಕ್ಕದ್ದು. ಮತದಾನ ನಡೆಯುವ ದಿನಾಂಕದಂದು ಅಥವಾ ದಿನಾಂಕಗಳಲ್ಲಿ ಮತದಾನ ನಡೆಯುವ ಸ್ಥಳದ ಹೊರಗೆ ಚುನಾವಣಾ ಆಯೋಗವು ತನ್ನ ಕೇಂದ್ರವನ್ನು ಸ್ಥಾಪಿಸತಕ್ಕದ್ದು. ಸದರಿ ಕೇಂದ್ರದಲ್ಲಿ ಜಿಲ್ಲಾ ಪಂಚಾಯತ್ ಸದಸ್ಯನ ಹಾಜರಾತಿ ತೆಗೆದುಕೊಳ್ಳುವುದರ ಜೊತೆಗೆ ಈ ಕೆಳಕಂಡ ಮಾಹಿತಿಯನ್ನು ಪ್ರತಿ ಜಿಲ್ಲಾ ಪಂಚಾಯತ್ ಸದಸ್ಯನಿಂದ ಪಡೆಯತಕ್ಕದ್ದು. ಅಂದರೆ.–

| ಕ್ರಮ ಸಂಖ್ಯೆ | ವಿವರ | |
|---|---|---|
| 01 | ಸದಸ್ಯರ ಹೆಸರು ಮತ್ತು ವಿಳಾಸ | |
| 02 | ಸದಸ್ಯನು ಸೇರಿರುವ ರಾಜಕೀಯ ಪಕ್ಷವು ಸದಸ್ಯನಿಗೆ ವಿಪ್ ಜಾರಿ ಮಾಡಿದೆಯೇ? | ರಾಜಕೀಯ ಪಕ್ಷದ ಹೆಸರು :<br>ವಿಪ್ ಜಾರಿ ಮಾಡಿದೆಯೇ: |
| 03 | ಜಾರಿ ಮಾಡಿದ್ದಲ್ಲಿ ಸದಸ್ಯರ ಗಮನಕ್ಕೆ ಬಂದಿದೆಯೇ? | ಹೌದು ಅಥವಾ ಇಲ್ಲ |
| 04 | ಬಂದಿಲ್ಲದಿದ್ದಲ್ಲಿ, ಈಗ ವಿಪ್ ಪಡೆಯಲು ಇಚ್ಛಿಸಿದ್ದಾರೆಯೇ? | ಹೌದು ಅಥವಾ ಇಲ್ಲ |
| 05 | ವಿಪ್ ಪಡೆದಿದ್ದಕ್ಕೆ ಸ್ವೀಕೃತಿ (ಸದಸ್ಯರ ಸಹಿಯೊಂದಿಗೆ) | |
| 06 | ವಿಪ್ ನಿರಾಕರಿಸಲಾಗಿದೆಯೇ? | |

ಚುನಾವಣಾ ಆಯೋಗದಿಂದ ನಿರ್ದಿಷ್ಟಪಡಿಸಿದ ಅಧಿಕಾರಿಯ ಸಹಿ

(2) ವಿಪ್ ಪಡೆಯಲು ನಿರಾಕರಿಸಿದರೆ ಅಥವಾ ಉಲ್ಲಂಘಿಸಿದರೆ ಅಂತಹ ಮಾಹಿತಿಯನ್ನು ಚುನಾವಣಾ ಆಯೋಗದ ಕೇಂದ್ರದ ಅಧಿಕಾರಿಯು ಚುನಾವಣಾ ಆಯೋಗಕ್ಕೆ ಘಟನೆ ನಡೆದ ಕೂಡಲೇ ವರದಿ ನೀಡತಕ್ಕದ್ದು.

(3) ಚುನಾವಣಾ ಆಯೋಗವು ಉಪನಿಯಮ (2) ರಲ್ಲಿ ಮಾಹಿತಿಯನ್ನು ಸ್ವೀಕರಿಸಿದ ನಂತರ ಸಾಧ್ಯವಾದಷ್ಟು ಬೇಗನೆ ಪ್ರಕರಣ 175ಬಿ ರನ್ವಯ ಕ್ರಮ ತೆಗೆದುಕೊಳ್ಳತಕ್ಕದ್ದು.

(4) ಚುನಾವಣಾ ಪ್ರಕ್ರಿಯೆಯನ್ನು ವಿಡಿಯೋ ಗ್ರಾಫ್ ಮಾಡತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಬಿ. ಧೋತ್ರೆ**
ಅಧೀನ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

**ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ೫೦೦ ಪ್ರತಿಗಳು**

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಗುರುವಾರ, ಏಪ್ರಿಲ್ ೨೧, ೨೦೧೬ (ವೈಶಾಖ ೧, ಶಕ ವರ್ಷ ೧೯೩೮) | ನಂ. ೬೪೪ |
|---|---|---|
| Part–III | Bengaluru, Thursday, April 21, 2016 (Vaishaka 1, Shaka Varsha 1938) | No. 644 |


ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ದಂಡಾಧಿಕಾರಿಯವರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಅಧಿಸೂಚನೆ

**ಸಂ:ಇಎಲ್‌ಎನ್(ಪಂ)ಸಿಆರ್/13/2013–14, ದಿನಾಂಕ: 21/04/2016.**

ಕರ್ನಾಟಕ ಮುನಿಸಿಪಾಲಿಟೀಸ್ ಕಾಯ್ದೆ 1964ರ ಕಲಂ 19 ಮತ್ತು ಕರ್ನಾಟಕ ಮುನಿಸಿಪಾಲಿಟೀಸ್ (ಎಲೆಕ್ಷನ್ ಆಫ್ ಕೌನ್ಸಿಲರ್ಸ್) ನಿಯಮಗಳು 1977ರ ನಿಯಮ 8ರನ್ವಯ ಹೊರಡಿಸಲಾದ ಈ ಕಛೇರಿಯ ಅಧಿಸೂಚನೆ ಸಂ:ಇಎಲ್‌ಎನ್(ಪಂ)ಸಿಆರ್/13/2013–14 ದಿನಾಂಕ: 30/03/2016ರ ಪ್ರಕಾರ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ಪುರಸಭೆಯ ವಾರ್ಡ್ ಸಂ.12 ಹಿಪ್ಪೆ ಆಂಜನೇಯಸ್ವಾಮಿ ಲೇಔಟ್‌ರ ತೆರವಾಗಿರುವ ಕೌನ್ಸಿಲರ್ ಸ್ಥಾನಕ್ಕೆ ಚುನಾಯಿತ ಸದಸ್ಯರನ್ನು ತುಂಬಲು ಉಪ ಚುನಾವಣೆಯನ್ನು ನಡೆಸಲಾಗಿದ್ದು, ಸದರಿ ಉಪ ಚುನಾವಣೆಯ ಫಲಿತಾಂಶವನ್ನು ಸಂಬಂಧಪಟ್ಟ ಚುನಾವಣಾಧಿಕಾರಿಗಳು ಘೋಷಿಸಿರುತ್ತಾರೆ.

ಕರ್ನಾಟಕ ಮುನಿಸಿಪಾಲಿಟೀಸ್ ಕಾಯ್ದೆ 1964ರ ಕಲಂ 20 ಮತ್ತು ಕರ್ನಾಟಕ ಮುನಿಸಿಪಾಲಿಟೀಸ್ (ಎಲೆಕ್ಷನ್ ಆಫ್ ಕೌನ್ಸಿಲರ್ಸ್) ನಿಯಮಗಳು 1977ರ ನಿಯಮ 66ರ ಅನ್ವಯ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿಯಾದ ಎಸ್.ಪಾಲಯ್ಯ, ಭಾ.ಆ.ಸೇ., ಎಂಬ ನಾನು ನೆಲಮಂಗಲ ಪುರಸಭೆಗೆ ವಾರ್ಡ್ ಸಂ.12 ಹಿಪ್ಪೆ ಆಂಜನೇಯಸ್ವಾಮಿ ಲೇಔಟ್ ರಿಂದ ಹೊಸದಾಗಿ ಆಯ್ಕೆಯಾದ ಸದಸ್ಯರ (ಕೌನ್ಸಿಲರ್‌ನ) ಹೆಸರನ್ನು ಈ ಕೆಳಗೆ ನಮೂದಿಸಿರುವಂತೆ ಪ್ರಕಟಿಸಿರುತ್ತೇನೆ.

| ಕ್ರ ಸಂ. | ವಾರ್ಡ್ ಸಂಖ್ಯೆ ಮತ್ತು ಹೆಸರು | ಆಯ್ಕೆಯಾದ ಸದಸ್ಯರ ಹೆಸರು ಮತ್ತು ವಿಳಾಸ ಶ್ರೀಮತಿ/ಶ್ರೀಯುತರಾದ | ಯಾವ ಪಕ್ಷದಿಂದ ಚುನಾಯಿತ ರಾಗಿರುತ್ತಾರೆ | ಮೀಸಲಾತಿ ವಿವರ |
|---|---|---|---|---|
| 1 | 2 | 3 | 4 | 5 |
| 1 | 12–ಹಿಪ್ಪೆ ಆಂಜನೇಯಸ್ವಾಮಿ ಲೇಔಟ್ | ಎಸ್.ಹೆಚ್.ದಾಕ್ಷಾಯಿಣಿ ಕೋಂ ಎನ್.ಜಿ.ರವಿಕುಮಾರ್, ಶ್ರೀ ಅಂಜನಾದ್ರಿ ನಿಲಯ, ಇಂದ್ರಮ್ಮ ಲೇಔಟ್, ಸುಭಾಷ್ ನಗರ, 1ನೇ ಅಡ್ಡರಸ್ತೆ, ಕೆ.ಇ.ಬಿ. ಮುಂಭಾಗ, ನೆಲಮಂಗಲ. | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ | ಸಾಮಾನ್ಯ (ಮಹಿಳೆ) |

**ಎಸ್.ಪಾಲಯ್ಯ**
ಜಿಲ್ಲಾಧಿಕಾರಿ,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 50 ಪ್ರತಿಗಳು

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ – III | ಬೆಂಗಳೂರು, ಗುರುವಾರ, ಏಪ್ರಿಲ್ ೨೧, ೨೦೧೬ (ವೈಶಾಖ ೧, ಶಕ ವರ್ಷ ೧೯೩೭) | ನಂ. ೬೪೫ |
|---|---|---|
| ***Part – III*** | ***Bengaluru, Thursday, April 21, 2016 (Vaishaka 1, Shaka Varsha 1937)*** | ***No. 645*** |


ನೋಂದಣಿ ಮತ್ತು ಮುದ್ರಾಂಕ ಇಲಾಖೆ

ಅಧಿಸೂಚನೆ

**ಸಂಖ್ಯೆ: ದಾ/DR/CVC/25/2015-16, ದಾವಣಗೆರೆ, ದಿನಾಂಕ: 30-01-2016**

ವಿಷಯ: ದಾವಣಗೆರೆ ಜಿಲ್ಲಾ ನೋಂದಣಿ ಕಛೇರಿ ವ್ಯಾಪ್ತಿಯಲ್ಲಿನ ಉಪನೋಂದಣಿ ಕಛೇರಿಗಳ ವ್ಯಾಪ್ತಿಯಲ್ಲಿ ಬರುವ ಸ್ಥಿರಾಸ್ತಿಗಳ ನೋಂದಣಿಗಾಗಿ, ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯಗಳ ಮಾರ್ಗಸೂಚಿಯ ದರಪಟ್ಟಿಯ ಕುರಿತು

ಉಲ್ಲೇಖ: 1) ದಾವಣಗೆರೆ ಉಪಸಮಿತಿ ನಡವಳಿ ಸಂಖ್ಯೆ : CVC/25/2014-15 ದಿನಾಂಕ : 29-09-2015
2) ಹರಿಹರ ಉಪಸಮಿತಿ ನಡವಳಿ ಸಂಖ್ಯೆ : CVC/25/2014-15 ದಿನಾಂಕ : 28-10-2015
3) ಚನ್ನಗಿರಿ ಉಪಸಮಿತಿ ನಡವಳಿ ಸಂಖ್ಯೆ : CVC/25/2014-15 ದಿನಾಂಕ : 03-09-2015
4) ಹೊನ್ನಾಳಿ ಉಪಸಮಿತಿ ನಡವಳಿ ಸಂಖ್ಯೆ : CVC/25/2014-15 ದಿನಾಂಕ : 31-10-2015
5) ಹರಪನಹಳ್ಳಿ ಉಪಸಮಿತಿ ನಡವಳಿ ಸಂಖ್ಯೆ : CVC/25/2014-15 ದಿನಾಂಕ : 13-11-2015
6) ಜಗಳೂರು ಉಪಸಮಿತಿ ನಡವಳಿ ಸಂಖ್ಯೆ : CVC/25/2014-15 ದಿನಾಂಕ : 04-11-2015
7) ಕೇಂದ್ರ ಮೌಲ್ಯ ಮಾಪನ ಸಮಿತಿ ಸಭೆಯ ನಡವಳಿ ಸಂಖ್ಯೆ : 25/2014-15, ದಿನಾಂಕ : 20-10-2015 ಮತ್ತು ದಿನಾಂಕ : 15-03-2016

1. ದಾವಣಗೆರೆ ಜಿಲ್ಲಾ ನೋಂದಣಿ ಕಛೇರಿಯ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಉಪನೋಂದಣಿ ಕಛೇರಿಗಳಲ್ಲಿಯ ಸ್ಥಿರಾಸ್ತಿಗಳ ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯಗಳ ಮಾರ್ಗಸೂಚಿ ದರಗಳನ್ನು ಪರಿಷ್ಕರಿಸಿ ಹೊರಡಿಸಿದ ಉಲ್ಲೇಖ (1) ರಿಂದ (6) ರವರೆಗೆ ಸಾರ್ವಜನಿಕ ಆಕ್ಷೇಪಣೆ/ಸಲಹೆ/ಸೂಚನೆಗಳಿಗಾಗಿ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಆಕ್ಷೇಪಣೆ/ಸಲಹೆ/ಸೂಚನೆಗಳನ್ನು ಸಲ್ಲಿಸುವಂತೆ ದಿ: 31-08-2015 ರಂದು ಪ್ರಕಟಿಸಲಾಗಿತ್ತು.

2. ಪರಿಷ್ಕೃತ ಮಾರ್ಗಸೂಚಿ ದರಪಟ್ಟಿಗಳನ್ನು ಸಾರ್ವಜನಿಕರಿಗೆ ಲಭ್ಯವಾಗಿರುವಂತೆ ಆಯಾ ಉಪನೋಂದಣಿ ಕಛೇರಿಗಳಲ್ಲಿ /ಜಿಲ್ಲಾ ನೋಂದಣಿ ಕಛೇರಿಯಲ್ಲಿ ಸೂಕ್ತ ಕ್ರಮ ಕೈಗೊಳ್ಳಲಾಗಿತ್ತು. ಮೇಲ್ಕಂಡ ಉಲ್ಲೇಖಗಳಲ್ಲಿ ನಡೆದ ಮೌಲ್ಯಮಾಪನ ಉಪ–ಸಮಿತಿಯ ಸಭೆಯಲ್ಲಿ ಸಾರ್ವಜನಿಕರಿಂದ ಸ್ವೀಕೃತವಾದ ಆಕ್ಷೇಪಣೆ/ಸಲಹೆ/ಸೂಚನೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಸೂಕ್ತ ಕ್ರಮ ಜರುಗಿಸಿ ಈ ಬಗ್ಗೆ ಕ್ರಮವಹಿಸಿರುವ ವಿಷಯಗಳನ್ನು ಉಲ್ಲೇಖ (7) ರ ಕೇಂದ್ರ ಮೌಲ್ಯ ಮಾಪನ ಸಮಿತಿಯಲ್ಲಿ ಚರ್ಚಿಸಿ ಆಡಳಿತಾತ್ಮಕ ಅನುಮೋದನೆ ಪಡೆದು ಅಂತಿಮಗೊಳಿಸಲಾಗಿದೆ.

3. ಕರ್ನಾಟಕ ಮುದ್ರಾಂಕ ಕಾಯ್ದೆ 1957 ರ ಸೆಕ್ಷನ್ 45–ಬಿ ಮತ್ತು ಕರ್ನಾಟಕ ಮುದ್ರಾಂಕ (ಆಸ್ತಿಯ ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯ ಮಾರ್ಗಸೂಚಿಯ ಪರಿಷ್ಕರಣೆ ಮತ್ತು ಪ್ರಕಟಣೆಗಾಗಿ ಕೇಂದ್ರ ಮೌಲ್ಯ ಮಾಪನ ಸಮಿತಿಯ ರಚನೆ) ಅಧಿನಿಯಮಗಳು 2003 ರ ಅಧಿನಿಯಮ 7(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೌಲ್ಯ ಮಾಪನ ಉಪ–ಸಮಿತಿಯ ಸ್ಥಿರಾಸ್ತಿಗಳ ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯಗಳ ಮಾರ್ಗಸೂಚಿಯ ದರಗಳನ್ನು ಈ ಮೂಲಕ ಪರಿಷ್ಕರಿಸಿ ಪ್ರಕಟಿಸಲಾಗಿದೆ. ಸದರಿ ಮಾರ್ಗಸೂಚಿ ದರಗಳು ಅನುಬಂಧದಲ್ಲಿರುವ ದಾವಣಗೆರೆ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಕೆಳಗೆ ಪಟ್ಟಿಮಾಡಿರುವ ಉಪನೋಂದಣಿ ಕಛೇರಿ ವ್ಯಾಪ್ತಿಗೆ ಒಳಪಡುವ ಸ್ಥಿರಾಸ್ತಿಗಳು ಮತ್ತು ಕಟ್ಟಡಗಳಿಗೆ ಅನ್ವಯಿಸುತ್ತವೆ. **ಈ ಅಧಿಸೂಚನೆಯು ದಿನಾಂಕ : 01–04–2016 ರಿಂದ ದಿ: 31–03–2017 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಯಾವುದು ಮೊದಲೊ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.**

4. ಈ ಕೆಳಕಂಡ 6 ಉಪ ನೋಂದಣಿ ಕಛೇರಿಗಳ ವ್ಯಾಪ್ತಿಯಲ್ಲಿ ಬರುವ ಸ್ಥಿರಾಸ್ತಿಗಳ ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯ ಮಾರ್ಗಸೂಚಿ ಹಾಗೂ ಕಟ್ಟಡಗಳಿಗೆ ಅನ್ವಯಿಸುವಂತೆ ದರಗಳನ್ನು ಪರಿಷ್ಕರಿಸಿ ಅನುಬಂಧ 1 ಮತ್ತು ಅನುಬಂಧ 2 ರಲ್ಲಿ ಪ್ರಕಟಿಸಲಾಗಿದೆ.

| ಕ್ರ. ಸಂ. | ಉಪನೋಂದಣಿ ಕಛೇರಿಯ ಹೆಸರು | ಪುಟ ಸಂಖ್ಯೆ |
|---|---|---|
| 1 | ದಾವಣಗೆರೆ ಉಪನೋಂದಣಿ ಕಛೇರಿ | **49** |
| 2 | ಹರಿಹರ ಉಪನೋಂದಣಿ ಕಛೇರಿ | 23 |
| 3 | ಚನ್ನಗಿರಿ ಉಪನೋಂದಣಿ ಕಛೇರಿ | 31 |
| 4 | ಹೊನ್ನಾಳಿ ಉಪನೋಂದಣಿ ಕಛೇರಿ | 24 |
| 5 | ಹರಪನಹಳ್ಳಿ ಉಪನೋಂದಣಿ ಕಛೇರಿ | 20 |
| 6 | ಜಗಳೂರು ಉಪನೋಂದಣಿ ಕಛೇರಿ | 24 |

ಅಧ್ಯಕ್ಷರು, ಕೇಂದ್ರ ಮೌಲ್ಯ ಮಾಪನ ಸಮಿತಿ, ಬೆಂಗಳೂರು ಇವರ ಆದೇಶದ ಮೇರೆಗೆ

**ಡಿ.ವಿ. ಗುರುಮೂರ್ತಿ**
ಜಿಲ್ಲಾನೋಂದಣಾಧಿಕಾರಿಗಳು ಮತ್ತು ಮುದ್ರಾಂಕಗಳ ಉಪ–ಆಯುಕ್ತರು, ದಾವಣಗೆರೆ
ಹಾಗೂ ಸದಸ್ಯರು, ಕೇಂದ್ರ ಮೌಲ್ಯಮಾಪನ ಸಮಿತಿ

# ಅನುಬಂಧ–1

## 1. ಮೌಲ್ಯ ಮಾಪನಕ್ಕೆ ಸಂಬಂಧಿಸಿದಂತೆ ಅನ್ವಯಿಸುವ ವಿಶೇಷ ಸೂಚನೆಗಳು :

### ಮೌಲ್ಯ ಮಾಪನಕ್ಕೆ ಸಂಬಂಧಿಸಿದಂತೆ ದಾವಣಗೆರೆ ಉಪ ನೋಂದಣಿ ಕಛೇರಿಗಳ ವ್ಯಾಪ್ತಿಗೆ ಅನ್ವಯಿಸುವ ವಿಶೇಷ ಸೂಚನೆಗಳು :–

| | | |
|---|---|---|
| 1. ಕೃಷಿ ಜಮೀನು (ಗ್ರಾಮ ಪಂಚಾಯ್ತಿಯ ವ್ಯಾಪ್ತಿಯ ಗ್ರಾಮಗಳ ಸರ್ವೆ ನಂ.ಗಳ ಸ್ವತ್ತುಗಳನ್ನು ಹೊರತುಪಡಿಸಿ) ಭಾಗಶ: ಇಲ್ಲದಂತೆ ಹಾಗೂ ಪೂರ್ಣ ಸರ್ವೆ ನಂ./ಹಿಸ್ಸಾ ಸರ್ವೆ ನಂ. ವಿಸ್ತೀರ್ಣದ ಜಮೀನುಗಳಿಗೆ ಅಭಿವೃದ್ಧಿ ಹೊಂದದ ಭೂಪರಿವರ್ತನೆಯಾದ ಜಮೀನುಗಳಿಗೆ ಈ ಕೆಳಕಂಡ ದರಗಳು ಅನ್ವಯಿಸುವುದು. | | |
| ಎ) | 5 ಗುಂಟೆ ವಿಸ್ತೀರ್ಣದ ವರೆಗಿನ ಜಮೀನಿಗೆ (5 ಗುಂಟೆ ಸೇರಿದಂತೆ ) | ಸಂಬಂಧಿಸಿದ ಆಯಾ ಪ್ರದೇಶದ ನಿವೇಶನ ದರ ಅಥವಾ ಆಯಾ ಕೃಷಿ ಜಮೀನಿನ ತರಹದ ದರ (ಪ್ರತಿ ಎಕರೆ ದರಗಳನ್ನು ಪ್ರತಿ ಚದರ ಮೀಟರ್‌ಗೆ ಪರಿವರ್ತಿಸಿದಾಗ ಬರುವ ದರ) ಯಾವುದು ಹೆಚ್ಚು ಅದನ್ನು ಅಳವಡಿಸತಕ್ಕದ್ದು. |
| ಬಿ) | 5 ಗುಂಟೆಯಿಂದ ಮೇಲ್ಪಟ್ಟು 7.5 ಗುಂಟೆಯವರೆಗೆ ವಿಸ್ತೀರ್ಣದ ಜಮೀನಿಗೆ (7.5 ಗುಂಟೆ ಸೇರಿದಂತೆ) | ಸಂಬಂಧಿಸಿದ ಆಯಾ ಪ್ರದೇಶದ ನಿವೇಶನ ದರದಲ್ಲಿ 70% ರಷ್ಟು ಅಥವಾ ಆಯಾ ಕೃಷಿ ಜಮೀನಿನ ತರಹದ ದರ (ಪ್ರತಿ ಎಕರೆ ದರಗಳನ್ನು ಪ್ರತಿ ಚದರ ಮೀಟರ್‌ಗೆ ಪರಿವರ್ತಿಸಿದಾಗ ಬರುವ ದರ) ಯಾವುದು ಹೆಚ್ಚು ಅದನ್ನು ಅಳವಡಿಸತಕ್ಕದ್ದು. |
| ಸಿ) | 7.5 ಗುಂಟೆಯಿಂದ ಮೇಲ್ಪಟ್ಟು 10 ಗುಂಟೆಯವರೆಗೆ ವಿಸ್ತೀರ್ಣದ ಜಮೀನಿಗೆ (10 ಗುಂಟೆ ಸೇರಿದಂತೆ) | ಸಂಬಂಧಿಸಿದ ಆಯಾ ಪ್ರದೇಶದ ನಿವೇಶನ ದರದಲ್ಲಿ 50% ರಷ್ಟು ಅಥವಾ ಆಯಾ ಕೃಷಿ ಜಮೀನಿನ ತರಹದ ದರ (ಪ್ರತಿ ಎಕರೆ ದರಗಳನ್ನು ಪ್ರತಿ ಚದರ ಮೀಟರ್‌ಗೆ ಪರಿವರ್ತಿಸಿದಾಗ ಬರುವ ದರ) ಯಾವುದು ಹೆಚ್ಚು ಅದನ್ನು ಅಳವಡಿಸತಕ್ಕದ್ದು. |
| ನಿವೇಶನ ದರ = ಯಾವ ಉದ್ದೇಶಕ್ಕೆ ಭೂಪರಿವರ್ತನೆ ಆಗಿರುತ್ತದೆಯೋ ಆ ಉದ್ದೇಶದ (ಅಂದರೆ ವಸತಿ, ಕೈಗಾರಿಕೆ ಮತ್ತು ವಾಣಿಜ್ಯಯೋಪಯೋಗಿ/ವಸತಿಯೇತರ ಉದ್ದೇಶಗಳು) ನಿವೇಶನ ದರವನ್ನು ವಸತಿಯೇತರ/ವಾಣಿಜ್ಯಯೋಪಯೋಗಿ/ಸ್ವತ್ತು ಹೆಚ್ಚುವರಿ ದರದೊಂದಿಗೆ ಅಳವಡಿಸುವುದು. | | |
| 2. ಈ ಕೆಳಕಂಡ ಉದ್ದೇಶಕ್ಕಾಗಿ ಭೂಪರಿವರ್ತನೆಯಾದ ಪೂರ್ಣ ವಿಸ್ತೀರ್ಣದ (ಸರ್ವೆ ನಂಬರಿನ ಸಂಪೂರ್ಣ ವಿಸ್ತೀರ್ಣದಂತೆ ಹಾಗೂ ಭಾಗಶಃ ಇಲ್ಲದಂತೆ) ಅಭಿವೃದ್ಧಿ ಹೊಂದದ ಸ್ವತ್ತನ್ನು ಪರಭಾರೆ ಮಾಡಿದಾಗ ಕೆಳಕಂಡ ಹೆಚ್ಚಿಗೆ ದರವನ್ನು ಮೂಲ ಕೃಷಿ ದರಗಳಿಗೆ ಅಳವಡಿಸುವುದು. | | |
| ಎ) | ಕೈಗಾರಿಕೋಪಯೋಗಿ | 55% (10 ಗುಂಟೆಗೂ ಹೆಚ್ಚಿನ ವಿಸ್ತೀರ್ಣದ ಜಮೀನುಗಳಿಗೆ) |
| ಬಿ) | ವಾಸೋಪಯೋಗಿ | 65% (10 ಗುಂಟೆಗೂ ಹೆಚ್ಚಿನ ವಿಸ್ತೀರ್ಣದ ಜಮೀನುಗಳಿಗೆ) |
| ಸಿ) | ವಾಣಿಜ್ಯೋಪಯೋಗಿ/ ವಸತಿಯೇತರ | 80% (10 ಗುಂಟೆಗೂ ಹೆಚ್ಚಿನ ವಿಸ್ತೀರ್ಣದ ಜಮೀನುಗಳಿಗೆ) |
| 3. ಮಾರ್ಗಸೂಚಿ ಪಟ್ಟಿಯಲ್ಲಿ ನಿಗಧಿಪಡಿಸದೆ ಇರುವ ರಾಷ್ಟ್ರೀಯ ಹೆದ್ದಾರಿ/ವರ್ತುಲ ರಸ್ತೆಗಳಿಗೆ ಹೊಂದಿಕೊಂಡಿರುವ ಸ್ವತ್ತುಗಳಿಗೆ ಆಯಾ ಪ್ರದೇಶದ ದರಗಳಿಗೆ 50% ರಷ್ಟು ಮತ್ತು ರಾಜ್ಯ ಹೆದ್ದಾರಿಗಳಿಗೆ ಆಯಾ ಪ್ರದೇಶದ ದರಕ್ಕೆ 25% ರಷ್ಟು ಹೆಚ್ಚಿಗೆ ದರ ನಿಗಧಿಪಡಿಸುವುದು. | | |
| 4. ಯಾವುದೇ ಪ್ರದೇಶದಲ್ಲಿರುವ ವಾಣಿಜ್ಯ ಮತ್ತು ವಸತಿಯೇತರ (ಕೈಗಾರಿಕೆಯನ್ನು ಹೊರತುಪಡಿಸಿ) ನಿವೇಶನಗಳಿಗೆ ಆಯಾ ಪ್ರದೇಶಗಳ ವಾಸೋಪಯೋಗಿ ನಿವೇಶನ ದರದ ಮೇಲೆ ಶೇಕಡ 40 ರಷ್ಟು ಹೆಚ್ಚಿಸಿ ದರ ನಿಗಧಿಪಡಿಸುವುದು. ಈಗಾಗಲೇ ವಾಣಿಜ್ಯ /ವಸತಿಯೇತರ ಉದ್ದೇಶಕ್ಕಾಗಿಯೆ ದರ ನಿಗಧಿಪಡಿಸುವುದನ್ನು ಹೊರತುಪಡಿಸಿ. | | |

| |
|---|
| 5. ಮೂಲೆ ನಿವೇಶನಗಳಿಗೆ ಮತ್ತು ಯಾವುದೇ ಎರಡು ಕಡೆ ರಸ್ತೆ ಇರುವ ನಿವೇಶನಗಳಿಗೆ, ಆಯಾ ಪ್ರದೇಶದ ನಿವೇಶನಗಳ ದರಗಳ 10% ರಷ್ಟು ಹೆಚ್ಚಿಗೆ ದರ ನಿಗಧಿಪಡಿಸುವುದು. |
| 6. ಈಗಾಗಲೇ ಮಾರ್ಗಸೂಚಿಯಲ್ಲಿ ಕೈಗಾರಿಕೋಪಯೋಗಿ ಎಂದು ಸ್ಪಷ್ಟಪಡಿಸಿರುವ ಪ್ರದೇಶಗಳಿಗೆ ನಿಗಧಿಪಡಿಸಿರುವ ನಿವೇಶನದ ದರವನ್ನು ಅನುಸರಿಸತಕ್ಕದ್ದು. ಈ ಪ್ರದೇಶಗಳನ್ನು ಹೊರತುಪಡಿಸಿ ಇತರೆ ಎಲ್ಲಾ ಪ್ರದೇಶಗಳಲ್ಲಿ ಇರುವ ಕೈಗಾರಿಕೋಪಯೋಗಿ ನಿವೇಶನಗಳಿಗೆ ವಾಸೋಪಯೋಗಿ ನಿವೇಶನ ದರ ನಿಗಧಿಪಡಿಸುವುದು. |
| 7. ಈಗಾಗಲೇ ಮಾರ್ಗಸೂಚಿಯಲ್ಲಿ ದರ ನಿಗದಿಪಡಿಸದೆ ಇರುವ ವಾಣಿಜ್ಯ / ವಸತಿಯೇತರ ಫ್ಲಾಟ್‌ಗಳಿಗೆ /ಸರ್ವೀಸ್ ಅಪಾರ್ಟ್‌ಮೆಂಟ್‌ಗಳಿಗೆ ವಾಸೋಪಯೋಗಿ ಅಪಾರ್ಟ್‌ಮೆಂಟ್/ಫಾಟ್‌ಗಳ ದರದ 30% ರಷ್ಟು ಹೆಚ್ಚಿಗೆ ನಿಗಧಿಪಡಿಸುವುದು (ಸ್ಥಳಿಯ ಸಂಸ್ಥೆ/ಪ್ರಾಧಿಕಾರ ಅನುಮೋದಿಸಿದ ನಕ್ಷೆಯಂತೆ). |
| 8. ಅಪಾರ್ಟ್‌ಮೆಂಟ್‌ನ ಓಪನ್ ಟೆರೇಸ್‌ಗೆ/ ಗಾರ್ಡನ್ ಏರಿಯಾಗೆ/ ಎಕ್ಸ್‌ಕ್ಲೂಸಿವ್ ಯೂಸೇಜ್ ಏರಿಯಾಗಳಿಗೆ 25% ರಷ್ಟು ಸೂಪರ್ ಬಿಲ್ಟಪ್ ಏರಿಯಾ ದರಗಳನ್ನು ನಿಗಧಿಪಡಿಸುವುದು. |
| 9. ಅನುಬಂಧ-2 ರಲ್ಲಿಯ ಅಪಾರ್ಟ್‌ಮೆಂಟ್/ಫ್ಲಾಟ್ ದರಗಳು ಸೂಪರ್‌ಬಿಲ್ಟಪ್ ಏರಿಯಾದ ಪ್ರಾಥಮಿಕ ದರಗಳಾಗಿರುತ್ತವೆ (only basic rate): ಅಪಾರ್ಟ್‌ಮೆಂಟಿನ ಒಟ್ಟು ಮೌಲ್ಯ = ಸೂಪರ್‌ಬಿಲ್ಟಪ್ ಏರಿಯಾದ ಪ್ರಾಥಮಿಕ ದರದ ಮೌಲ್ಯ (only basic rate)+ ಹೆಚ್ಚುವರಿ ಅಂತಸ್ತಿನ ಮೌಲ್ಯ + ಹೆಚ್ಚುವರಿ ವಿಶೇಷ ಸೌಲಭ್ಯ ಗುಂಪಿನ ಮೌಲ್ಯ. |
| 10. ಅನುಬಂಧ-2ರಲ್ಲಿಯ ವಿಲ್ಲಾ / ರೋ ಹೌಸ್‌ಗಳ ದರಗಳು ವಿಲ್ಲಾ / ರೋ ಹೌಸ್‌ಗಳ ನಿವೇಶನದ ದರಗಳಾಗಿದ್ದು, ವಿಲ್ಲಾ / ರೋ ಹೌಸ್ ಒಟ್ಟು ಮೌಲ್ಯ =ವಿಲ್ಲಾ / ರೋ ಹೌಸ್‌ಗಳ ನಿವೇಶನ ದರದ ಮೌಲ್ಯ + ವಿಲ್ಲಾ / ರೋ ಹೌಸ್ ಕಟ್ಟಡದ ಮೌಲ್ಯ + ಹೆಚ್ಚುವರಿ ವಿಶೇಷ ಸೌಲಭ್ಯ ಗುಂಪಿನ ಮೌಲ್ಯ. |
| 11. ನೋಂದಣಿ ಪೂರ್ವದಲ್ಲಿ ಹೊಸ ಬಡಾವಣೆ, ಬಹುಮಹಡಿ ಕಟ್ಟಡ, ಅಪಾರ್ಟ್‌ಮೆಂಟ್/ ವಿಲ್ಲಾ, ರೋ ಹೌಸ್‌ಗಳು /ವಿಲ್ಲಾಮೆಂಟ್/ಹೈಬ್ರಿಡ್/ ಇತರೆ ಯಾವುದೇ ರೀತಿಯ ಯೋಜನೆಗಳು ಬಂದಲ್ಲಿ ಕೇಂದ್ರ ಮೌಲ್ಯಮಾಪನ ಸಮಿತಿಯಿಂದ ದರವನ್ನು ನಿಗಧಿಪಡಿಸಿಕೊಳ್ಳತಕ್ಕದ್ದು. |
| 12. ಮಾರುಕಟ್ಟೆ ಮಾರ್ಗಸೂಚಿ ದರಗಳನ್ನು ನಿಗದಿಪಡಿಸುವಾಗ ಸರಿಯಾದ ಮುದ್ರಾಂಕಗಳ ಶುಲ್ಕ ಹಾಗೂ ನೋಂದಣಿ ಶುಲ್ಕ ವಿಧಿಸುವ ಉದ್ದೇಶಕ್ಕಾಗಿ) ಕರ್ನಾಟಕ ಲ್ಯಾಂಡ್ ರೆವೆನ್ಯೂ ಆಕ್ಟ್ 1974 ಸೆಕ್ಷನ್ 109 ರ ಅಡಿಯಲ್ಲಿ ಅಭಿವೃದ್ಧಿ ಚಟುವಟಿಕೆಗಳಿಗೆ ಖರೀದಿಸಲು ಅನುಮತಿ ಪಡೆದ ಜಮೀನುಗಳನ್ನು ಆಯಾ ಉದ್ದೇಶಕ್ಕೆ ಭೂಪರಿವರ್ತಿತ ಜಮೀನುಗಳ ದರಗಳನ್ನು ಅಳವಡಿಸಬೇಕು.<br>13. ಸ್ಥಳೀಯ ಸಂಸ್ಥೆಗಳು ಉನ್ನತೀಕರಣಗೊಂಡಲ್ಲಿ/ಮೇಲ್ದರ್ಜೆಗೊಂಡಾಗ ಸಂಬಂಧಿಸಿದ ದರಗಳನ್ನು ಅಳವಡಿಸಬೇಕು. (ಉದಾ: ನಗರಸಭೆಯು ಮಹಾನಗರಪಾಲಿಕೆಯಾದಾಗ / ಪಟ್ಟಣ ಪುರಸಭೆಗಳು ನಗರಸಭೆಯಾದಾಗ/ ಪಂಚಾಯ್ತಿ ಪಟ್ಟಣ ಪಂಚಾಯ್ತಿಯಾಗಿ ಉನ್ನತೀಕರಣಗೊಂಡಲ್ಲಿ/ ಮೇಲ್ದರ್ಜೆಗೊಂಡಾಗ ಸಂಬಂಧಿಸಿದ ಪಟ್ಟಣ ಪಂಚಾಯ್ತಿ/ ಪುರಸಭೆ/ ನಗರಸಭೆ/ ಮಹಾನಗರಪಾಲಿಕೆಯ ಕಟ್ಟಡ ದರಗಳನ್ನು ಅಳವಡಿಸಬೇಕು.) |
| 14. ಸ್ಥಿರಾಸ್ತಿಗಳ ಮಾರ್ಗಸೂಚಿ ಬೆಲೆಪಟ್ಟಿಯಲ್ಲಿನ ಬೆಲೆಗಳು ಜಾರಿಗೆ ಬಂದ ದಿನಾಂಕದಿಂದ ನಂತರ ನೋಂದಣಿಗೆ ಹಾಜರುಪಡಿಸುವ ದಸ್ತಾವೇಜುಗಳಿಗೂ ಪ್ರಕಟಣೆಗೊಂಡ ಪಟ್ಟಿಯಲ್ಲಿನ ಮೌಲ್ಯದಂತೆಯೇ ಬೆಲೆಯನ್ನು ಪರಿಗಣಿಸತಕ್ಕದ್ದಾಗಿರುತ್ತದೆ. ಪ್ರಕಟಣೆಗೊಂಡ ದಿನಾಂಕದಿಂದ ಹಿಂದೆ ಬರೆಯಲಾದ ಪತ್ರಗಳೂ ಸಹ ಈ ಪಟ್ಟಿಯಲ್ಲಿನ ದರಗಳಂತೆ ಮೌಲ್ಯವನ್ನು ನಿರ್ಧರಿಸತಕ್ಕದ್ದಾಗಿರುತ್ತದೆ. ತಪ್ಪಿದಲ್ಲಿ ಕರ್ನಾಟಕ ಮುದ್ರಾಂಕ ಕಾಯ್ದೆ 1957ರ ಕಲಂ 45(ಎ)(1)ರ ಅಡಿಯಲ್ಲಿ ಕ್ರಮ ಜರುಗಿಸತಕ್ಕದ್ದು. |
| 15. 1 ಚದರ ಮೀಟರ್=10.764 ಚದರ ಅಡಿಗಳು ಶುಲ್ಕ ಲೆಕ್ಕ ಹಾಕಲು ಉಪಯೋಗಿಸಬೇಕು. |

## ಉ.ನೋ : ದಾವಣಗೆರೆ ಜಿ.ನೋ: ದಾವಣಗೆರೆ ಇವರು ಅನುಸರಿಸಬೇಕಾದ ಪ್ರಸ್ತಾವಿತ ಕಟ್ಟಡಗಳ ದರಗಳು (ಎಲ್ಲಾ ರೀತಿಯ ಉಪಯೋಗದ ಸ್ವತ್ತುಗಳಿಗೆ)

| ಕ್ರ.ಸಂ | ಕಟ್ಟಡದ ತರಹ | ರಾಜ್ಯಾದ್ಯಂತ ಎಲ್ಲಾ ಮಹಾನಗರ ಪಾಲಿಕೆ ವ್ಯಾಪ್ತಿ | | ರಾಜ್ಯಾದ್ಯಂತ ಎಲ್ಲಾ ನಗರಸಭೆಗಳ ವ್ಯಾಪ್ತಿ | | ರಾಜ್ಯಾದ್ಯಂತ ಎಲ್ಲಾ ಪಟ್ಟಣ ಪುರಸಭೆ, ಪಟ್ಟಣ ಪಂಚಾಯ್ತಿ ವ್ಯಾಪ್ತಿ | | ರಾಜ್ಯಾದ್ಯಂತ ಇತರೆ ಎಲ್ಲಾ ಪ್ರದೇಶಗಳಿಗೆ | |
|---|---|---|---|---|---|---|---|---|---|
| | | ನೆಲಮಹಡಿ | ಮೇಲ್ಮಹಡಿ | ನೆಲಮಹಡಿ | ಮೇಲ್ಮಹಡಿ | ನೆಲಮಹಡಿ | ಮೇಲ್ಮಹಡಿ | ನೆಲಮಹಡಿ | ಮೇಲ್ಮಹಡಿ |
| | | ಪ್ರತಿ ಚದರ ಮೀಟರ್ ರೂಗಳಲ್ಲಿ | ಪ್ರತಿ ಚದರ ಮೀಟರ್ ರೂಗಳಲ್ಲಿ | ಪ್ರತಿ ಚದರ ಮೀಟರ್ ರೂಗಳಲ್ಲಿ | ಪ್ರತಿ ಚದರ ಮೀಟರ್ ರೂಗಳಲ್ಲಿ | ಪ್ರತಿ ಚದರ ಮೀಟರ್ ರೂಗಳಲ್ಲಿ | ಪ್ರತಿ ಚದರ ಮೀಟರ್ ರೂಗಳಲ್ಲಿ | ಪ್ರತಿ ಚದರ ಮೀಟರ್ ರೂಗಳಲ್ಲಿ | ಪ್ರತಿ ಚದರ ಮೀಟರ್ ರೂಗಳಲ್ಲಿ |
| 1 | 2 | 3 | 4 | 5 | 6 | 7 | 8 | 9 | 10 |
| 1 | ಆರ್.ಸಿ.ಸಿ. ಗ್ರಾನೈಟ್, ನೆಲಹಾಸು, ತೇಗದ ಮರ | **16200** | **15700** | **15700** | **15100** | **15100** | **14600** | **14600** | **14000** |
| 2 | ಆರ್.ಸಿ.ಸಿ. ಮಾರ್ಬಲ್, ನೆಲಹಾಸು, ತೇಗದ ಮರ | **16000** | **15400** | **15400** | **14900** | **14900** | **14400** | **14400** | **13800** |
| 3 | ಆರ್.ಸಿ.ಸಿ.ಮೊಸಾಯಿಕ್/ ವಿಟ್ರಿಫೈಡ್/ಸೆರಾಮಿಕ್ ನೆಲಹಾಸು | **13000** | **12400** | **12400** | **11900** | **11900** | **11300** | **11300** | **10800** |
| 4 | ಆರ್.ಸಿ.ಸಿ.ಮೊಸಾಯಿಕ್/ ಪಾಲಿಷ್ಡ್ ಕಡಪ/ಶಾಹಬಾದ/ಬೇತಮ್ ಜೆಲ್ಲಿ ನೆಲಹಾಸು,ಹೊನ್ನೆಮರ,ಉಕ್ಕಿನ ಕಿಟಕಿಗಳು | **12400** | **11900** | **11900** | **11300** | **11300** | **10800** | **10800** | **10300** |
| 5 | ಆರ್.ಸಿ.ಸಿ.ರೆಡಾಕ್ಸೈಡ್ ನೆಲಹಾಸು, ಎಲ್ಲಾ ರೀತಿಯ ಮರ ಅಥವಾ ಉಕ್ಕಿನ ಕಿಟಕಿ | **11300** | **10800** | **10800** | **10300** | **10300** | **9700** | **9200** | **8700** |
| 6 | ಮದ್ರಾಸ್ ತಾರಸಿ/ಕರಿಬಂಡೆ ತಾರಸಿ, ಬಿ.ಎಸ್. ಚಾವಣಿ, ಮಂಗಳೂರು ಹೆಂಚು, ಎ.ಸಿ.ಶೀಟ್ ರೆಡಾಕ್ಸೈಡ್ ನೆಲಹಾಸು, ಕಾಡಿನ ಮರ, ಸಿಮೆಂಟ್ ಗಾರೆ ಗೋಡೆ | **6000** | **5400** | **5400** | **4900** | **4900** | **4300** | **4300** | **3800** |
| 7 | ಕರಿಹೆಂಚು,ಮಣ್ಣಿನ ಮೇಲ್ಮುದ್ದಿ ಕಡಪ, ಮಣ್ಣಿನ ಗೋಡೆ, ಕಾಡಿನ ಮರ, ಗುಡಿಸಲು ಚಪ್ಪರ | **5200** | **4700** | **4700** | **4100** | **4100** | **3600** | **2400** | **–** |
| **ಷರಾ:** | 1. ಮೇಲ್ಕಂಡ ದರಗಳಲ್ಲಿ ನಾಗರೀಕ ಸೌಲಭ್ಯಗಳಾದ ಕುಡಿಯುವ ನೀರು, ಒಳಚರಂಡಿ, ವಿದ್ಯುತ್ ವೆಚ್ಚಗಳು ಮತ್ತು ಇತರೆ ಸಾರ್ವಜನಿಕ ವ್ಯವಸ್ಥೆಗಳನ್ನು ಒಳಗೊಂಡ ದರಗಳಾಗಿರುತ್ತದೆ. | | | | | | | | |
| | 2. ತಳಮಹಡಿ ಕಟ್ಟಡ (cellar, partial cellar& stilt) ಪಾರ್ಕಿಂಗ್‌ಗಾಗಿ/ವಾಹನ ನಿಲುಗಡೆಗಾಗಿ ನಿರ್ಮಿಸಿದ ಕಟ್ಟಡಕ್ಕೆ ನೆಲಮಹಡಿಯ ಕಟ್ಟಡದ ದರದ ಶೇಕಡ 66.00 ರಷ್ಟು(2/3) ದರಗಳನ್ನು ಅಳವಡಿಸಿಕೊಳ್ಳಬೇಕು. | | | | | | | | |

## ರಾಜ್ಯಾದ್ಯಂತ ಅನುಸರಿಸಬೇಕಾದ ಪ್ರಸ್ತಾವಿತ ಪಾರ್ಕಿಂಗ್ (ವಾಹನ ನಿಲ್ದಾಣ) ದರಗಳು (ಎಲ್ಲಾ ರೀತಿಯ ಉಪಯೋಗದ ಸ್ವತ್ತುಗಳಿಗೆ)

| ಕ್ರ. ಸಂ. | ಸ್ವತ್ತಿನ ಒಟ್ಟು ಮೌಲ್ಯ<br>ಎ) ನಿವೇಶನ ಮತ್ತು ಕಟ್ಟಡದ ಸ್ವತ್ತುಗಳಿಗೆ<br>ಬಿ) ಅಪಾರ್ಟ್‌ಮೆಂಟ್ ಕಟ್ಟಡಗಳಿಗೆ (ಸೂಪರ್ ಬಿಲ್ಟಪ್ ಮೌಲ್ಯ + ಹೆಚ್ಚುವರಿ ಅಂತಸ್ತಿನ ಮೌಲ್ಯ + ಹೆಚ್ಚುವರಿ ವಿಶೇಷ ಸೌಲಭ್ಯ ಗುಂಪಿನ ಮೌಲ್ಯ | ರಾಜ್ಯಾದ್ಯಂತ ಎಲ್ಲಾ ಮಹಾನಗರ ಪಾಲಿಕೆ ವ್ಯಾಪ್ತಿ<br>ಮೇಲ್ಚಾವಣಿ ರಹಿತ | ರಾಜ್ಯಾದ್ಯಂತ ಎಲ್ಲಾ ಮಹಾನಗರ ಪಾಲಿಕೆ ವ್ಯಾಪ್ತಿ<br>ಮೇಲ್ಚಾವಣಿ ಉಳ್ಳ | ರಾಜ್ಯಾದ್ಯಂತ ಎಲ್ಲಾ ನಗರಸಭೆಗಳ ವ್ಯಾಪ್ತಿ<br>ಮೇಲ್ಚಾವಣಿ ರಹಿತ | ರಾಜ್ಯಾದ್ಯಂತ ಎಲ್ಲಾ ನಗರಸಭೆಗಳ ವ್ಯಾಪ್ತಿ<br>ಮೇಲ್ಚಾವಣಿ ಉಳ್ಳ | ರಾಜ್ಯಾದ್ಯಂತ ಎಲ್ಲಾ ಪಟ್ಟಣ ಪುರಸಭೆ, ಪಟ್ಟಣ ಪಂಚಾಯ್ತಿ ವ್ಯಾಪ್ತಿ<br>ಮೇಲ್ಚಾವಣಿ ರಹಿತ | ರಾಜ್ಯಾದ್ಯಂತ ಎಲ್ಲಾ ಪಟ್ಟಣ ಪುರಸಭೆ, ಪಟ್ಟಣ ಪಂಚಾಯ್ತಿ ವ್ಯಾಪ್ತಿ<br>ಮೇಲ್ಚಾವಣಿ ಉಳ್ಳ | ರಾಜ್ಯಾದ್ಯಂತ ಇತರೆ ಎಲ್ಲಾ ಪ್ರದೇಶಗಳಿಗೆ<br>ಮೇಲ್ಚಾವಣಿ ರಹಿತ | ರಾಜ್ಯಾದ್ಯಂತ ಇತರೆ ಎಲ್ಲಾ ಪ್ರದೇಶಗಳಿಗೆ<br>ಮೇಲ್ಚಾವಣಿ ಉಳ್ಳ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | ರೂ. 50,00,000 ದವರೆಗೆ | 125000 | 140000 | 115000 | 130000 | 105000 | 120000 | 95000 | 110000 |
| 2 | ರೂ. 50,00,001-00 ರಿಂದ 1,00,00,000-00 ವರೆಗೆ | 140000 | 190000 | 130000 | 180000 | 120000 | 170000 | 110000 | 160000 |
| 3 | ರೂ. 1,00,00,001 ರಿಂದ ಮೇಲ್ಪಟ್ಟು | 190000 | 240000 | 180000 | 230000 | 170000 | 220000 | 160000 | 150000 |
| 4 | ದ್ವಿಚಕ್ರವಾಹನ ನಿಲ್ದಾಣ ಪ್ರತಿ ಸಂಖ್ಯೆ | 25000 | 25000 | 20000 | 20000 | 15000 | 15000 | 10000 | 10000 |

## 3. ಅಪಾರ್ಟ್‌ಮೆಂಟ್/ಫ್ಲಾಟ್‌ಗಳ ಮೇಲಂತಸ್ತುಗಳಿಗೆ ಹೆಚ್ಚುವರಿ ದರ ನಿಗಧಿಪಡಿಸುವ ಬಗ್ಗೆ

| ಕ್ರ. ಸಂ. | ಅಂತಸ್ತುಗಳು | ಶೇಕಡಾವಾರು ಹೆಚ್ಚುವರಿ | ಕ್ರ. ಸಂ | ಅಂತಸ್ತುಗಳು | ಶೇಕಡಾವಾರು ಹೆಚ್ಚುವರಿ |
|---|---|---|---|---|---|
| 1 | 0 ಯಿಂದ 5 ಅಂತಸ್ತಿನವರೆಗೆ | ಯಾವುದೇ ಹೆಚ್ಚುವರಿ ದರ ಇಲ್ಲ | 7 | 11 ನೇ ಅಂತಸ್ತಿಗೆ | ಸೂಪರ್ ಬಿಲ್ಟಪ್ ಏರಿಯಾದ ಮೌಲ್ಯ + 3.0% |
| 2 | 6 ನೇ ಅಂತಸ್ತಿಗೆ | ಸೂಪರ್ ಬಿಲ್ಟಪ್ ಏರಿಯಾದ ಮೌಲ್ಯ + 0.5% | 8 | 12 ನೇ ಅಂತಸ್ತಿಗೆ | ಸೂಪರ್ ಬಿಲ್ಟಪ್ ಏರಿಯಾದ ಮೌಲ್ಯ + 3.5% |
| 3 | 7 ನೇ ಅಂತಸ್ತಿಗೆ | ಸೂಪರ್ ಬಿಲ್ಟಪ್ ಏರಿಯಾದ ಮೌಲ್ಯ + 1.0% | 9 | 13 ನೇ ಅಂತಸ್ತಿಗೆ | ಸೂಪರ್ ಬಿಲ್ಟಪ್ ಏರಿಯಾದ ಮೌಲ್ಯ + 4.0% |
| 4 | 8 ನೇ ಅಂತಸ್ತಿಗೆ | ಸೂಪರ್ ಬಿಲ್ಟಪ್ ಏರಿಯಾದ ಮೌಲ್ಯ + 1.5% | 10 | 14 ನೇ ಅಂತಸ್ತಿಗೆ | ಸೂಪರ್ ಬಿಲ್ಟಪ್ ಏರಿಯಾದ ಮೌಲ್ಯ + 4.5% |
| 5 | 9 ನೇ ಅಂತಸ್ತಿಗೆ | ಸೂಪರ್ ಬಿಲ್ಟಪ್ ಏರಿಯಾದ ಮೌಲ್ಯ + 2.0% | 11 | 15 ನೇ ಅಂತಸ್ತಿಗೆ | ಸೂಪರ್ ಬಿಲ್ಟಪ್ ಏರಿಯಾದ ಮೌಲ್ಯ + 5.0% |
| 6 | 10 ನೇ ಅಂತಸ್ತಿಗೆ | ಸೂಪರ್ ಬಿಲ್ಟಪ್ ಏರಿಯಾದ ಮೌಲ್ಯ + 2.5% | | | |

ಅಪಾರ್ಟ್‌ಮೆಂಟ್/ಫ್ಲಾಟ್ ಮೇಲಂತಸ್ತುಗಳಿಗೆ ಹೆಚ್ಚುವರಿ ದರ ನಿಗದಿಪಡಿಸುವ ಬಗ್ಗೆ

(ಉದಾಹರಣೆ : 30,00,000 ಮೌಲ್ಯದ (1000 ಚ ಅಡಿ X ರೂ. 3000 ಪ್ರತಿ ಚ ಅಡಿಗೆ) ಅಪಾರ್ಟ್‌ಮೆಂಟ್‌ಗೆ ಮೇಲ್ಕಂಡ ದರಗಳಂತೆ ಆಗುವ ಹೆಚ್ಚುವರಿ ಮೌಲ್ಯ)

| ಕ್ರ. ಸಂ. | ಅಂತಸ್ತುಗಳು | ಶೇಕಡಾವಾರು | ಕ್ರ. ಸಂ. | ಅಂತಸ್ತುಗಳು | ಶೇಕಡಾವಾರು |
|---|---|---|---|---|---|
| 1 | 0 ಯಿಂದ 5 ಅಂತಸ್ತಿನವರೆಗೆ | 30,00,000 + ಯಾವುದೇ ಹೆಚ್ಚುವರಿ ದರ ಇಲ್ಲ | 7 | 11 ನೇ ಅಂತಸ್ತಿಗೆ | 30,00,000 + (30,00,000 X 3.0%)-30,90,000/- |
| 2 | 6 ನೇ ಅಂತಸ್ತಿಗೆ | 30,00,000 + (30,00,000 X 0.5%)-30,15,000/- | 8 | 12 ನೇ ಅಂತಸ್ತಿಗೆ | 30,00,000 + (30,00,000 X 3.5%)-31,05,000/- |
| 3 | 7 ನೇ ಅಂತಸ್ತಿಗೆ | 30,00,000 + (30,00,000 X 1.0%)-30,30,000/- | 9 | 13 ನೇ ಅಂತಸ್ತಿಗೆ | 30,00,000 + (30,00,000 X 4.0%)-31,20,000/- |
| 4 | 8 ನೇ ಅಂತಸ್ತಿಗೆ | 30,00,000 + (30,00,000 X 1.5%)-30,45,000/- | 10 | 14 ನೇ ಅಂತಸ್ತಿಗೆ | 30,00,000 + (30,00,000 X 4.5%)-31,35,000/- |
| 5 | 9 ನೇ ಅಂತಸ್ತಿಗೆ | 30,00,000 + (30,00,000 X 2.0%)-30,60,000/- | 11 | 15 ನೇ ಅಂತಸ್ತಿಗೆ | 30,00,000 + (30,00,000 X 5.0%)-31,50,000/- |
| 6 | 10 ನೇ ಅಂತಸ್ತಿಗೆ | 30,00,000 + (30,00,000 X 2.5%)-30,75,000/- | | | |

| 4. ಅಪಾರ್ಟ್‌ಮೆಂಟ್/ವಿಲ್ಲಾ/ವಿಲ್ಲಾಮೆಂಟ್/ಟೀನಮೆಂಟ್/ಗೇಟೆಡ್ ಕಮ್ಯೂನಿಟಿ ಹೌಸ್‌ಗಳ ವಿಶೇಷ ಸವಲತ್ತುಗಳಿಗಾಗಿ ಈ ಕೆಳಕಂಡಂತೆ ಹೆಚ್ಚುವರಿ ದರ ನಿಗದಿಪಡಿಸುವುದು. | |
|---|---|
| 1) ವಿನಾಯಿತಿ ನೀಡಲಾಗಿರುವ ಗುಂಪಿನೊಂದಿಗೆ ಯಾವುದೇ 4 ಕೆಳಕಂಡ ಗುಂಪುಗಳ ವಿಶೇಷ ಸವಲತ್ತುಗಳು ಇದ್ದಲ್ಲಿ. | ಆಯಾ ಪ್ರದೇಶದ / ರಸ್ತೆಯ ಸೂಪರ್ ಬಿಲ್ಟಪ್ ಏರಿಯಾದ ದರ ಮಾತ್ರ |
| 2) ಪ್ರತಿ ಹೆಚ್ಚುವರಿ ಕೆಳಕಂಡ ಗುಂಪುಗಳ ವಿಶೇಷ ಸವಲತ್ತುಗಳು ಇದ್ದಲ್ಲಿ | ಆಯಾ ಪ್ರದೇಶದ / ರಸ್ತೆಯ ಸೂಪರ್ ಬಿಲ್ಟಪ್ ಏರಿಯಾದ ದರ ಅನ್ವಯಿಸಿದ ಸ್ವತ್ತಿನ ಒಟ್ಟು ಮೌಲ್ಯ (Including higher floor additional rate but excluding Car Parking rate) + ಶೇಕಡಾ 0.75% ರಷ್ಟು ಹೆಚ್ಚುವರಿ ದರ. (ಅಂದರೆ 5 ಗುಂಪುಗಳಿಗೆ - 0.75%, 6 ಗುಂಪುಗಳಿಗೆ 1.5%, 7 ಗುಂಪುಗಳಿಗೆ 2.25%, 8 ಗುಂಪುಗಳಿಗೆ 3%, 9 ಗುಂಪುಗಳಿಗೆ 3.75%, 10 ಗುಂಪುಗಳಿಗೆ 4.5%, 11 ಗುಂಪುಗಳಿಗೆ 5.25%, 12 ಗುಂಪುಗಳಿಗೆ 6%, 13 ಗುಂಪುಗಳಿಗೆ 6.75%, 14 ಮತ್ತು ಹೆಚ್ಚುವರಿ ಗುಂಪಿನ ಸೌಲಭ್ಯಗಳಿಗೆ ಗರಿಷ್ಟ 7.5%) |

| List of Special Amenities provided for Apartments / Villas / Villaments / Tenament / Gated Community Houses. (Select the amenities by underlining the same and put mark in column no 3) | | |
|---|---|---|
| | **Special Amenities / Facilities / Benefits** | **Mark** |
| Exempted | a) Rain water harvesting, solar power, solar water heater, Fire fighting, Fire Prevention, Green Building concept low carbon material usage and similar types of aminities | |
| | b) Sewage treatment plant, solid waste management, individual garbage chute, Reflective roofs, water recycling / reuse plants. (These amenities is fully exempted) | |
| 1 | Club house, Community hall, Conference hall, party hall, Card room, Reading room, library, Banquet hall, party area, party lawn and similar types of amenities. | |
| 2 | Jogging track, Running track, Cycling track, Walking track, Pebble pathway, Reflexology path and similar types of amenities. | |
| 3 | Children play area, tot cot, children game area, Garden, Water body, Decorative pool, Plantation Garden, Barbeque pits, crèche, landscape area, fountain and similar types of amenities. | |
| 4 | Canteen, Mall, Commercial space, ATM, Bank, Hopcom, Janatha Bazar, Nandini Milk outlet, Provision store, Parlor, Cafeteria, Super market, Plaza and similar types of amenities. | |
| 5 | All type of outdoor play area, Badminton, Tennis, Basket ball, Volly ball, Base ball, Cricket, Foot ball, Hockey and similar types of amenities. | |
| 6 | All type of indoor game area, squash, snooker, Table tennis, carom room, Indoor games area and similar types of amenities. | |
| 7 | Swimming pool indoor, Kids pool, wading pool, aqua gym and similar types of amenities. | |
| 8 | Cargo lift, elevator, Mechanical lift for car park, High speed elevator and similar types of amenities. | |
| 9 | Surveillance of common area, manned security with video surveillance intelligent security, Motion sensor based lighting multi camera security, CCTV, Gated community, Intercom, Wifi Internet parlor, Video conference facility, Generator, UPS, Kiosk, Visitor Tracking system and similar types of amenities. | |
| 10 | Helipad, Golf field. | |
| 11 | Outdoor Amphitheatre, Open air theatre, Open stage and similar types of amenities. | |
| 12 | Health clinic, Ayurvedic parlor, Massage parlour, Beauty parlour, Spa, Aerobics, Yoga meditation, Unisex parlour, Steam & Sauna Jacuzzi, Gym, Day care center, Health club and similar types of amenities. | |
| 13 | Indoor Amphi theatre, Dance & Karaoke hall, Drama stage, Home theater hall. | |
| 14 | Home automation, smart home, IP door lock, prepaid power supply, piped cooking gas supply, gas bank, gas detector. | |

**ದಾವಣಗೆರೆ ಜಿಲ್ಲೆಯ ದಾವಣಗೆರೆ ತಾಲ್ಲೂಕು ಉಪನೋಂದಣಿ ಕಛೇರಿಯ ವ್ಯಾಪ್ತಿಗೆ ಒಳಪಡುವ ಸ್ಥಿರಾಸ್ತಿಗಳ ಪರಿಷ್ಕೃತ ಮೌಲ್ಯ ಅಂದಾಜು ಸರಾಸರಿ ಮಾರುಕಟ್ಟೆ ಮಾರ್ಗಸೂಚಿ**
**ಜಾರಿಗೆ ಬರುವ ದಿನಾಂಕ : ಕೇಂದ್ರ ಮೌಲ್ಯ ಮಾಪನ ಸಮಿತಿಯವರು ನಿರ್ಧರಿಸುವ ದಿನಾಂಕದಿಂದ ಜಾರಿಗೆ ಬರುವಂತೆ**

| ಕ್ರ. ಸಂ. | ಪ್ರದೇಶದ ಹೆಸರು | ಪರಿಷ್ಕೃತ ದರ | ಪರಿಷ್ಕೃತ ದರ |
|---|---|---|---|
| | | ವಾಸ | ವಾಣಿಜ್ಯ |
| | | ಚ ಮೀ ರೂ.ಗಳಲ್ಲಿ | ಚ ಮೀ ರೂ.ಗಳಲ್ಲಿ |
| 1 | 2 | 3 | 4 |
| | **ಒಂದನೇ ವಾರ್ಡು ಒಂದನೇ ಡಿವಿಜನ್** | | |
| | ಬಾರ್ ಲೈನ್ ರಸ್ತೆ ಯಾನೇ ವಸಂತ ರಸ್ತೆ ಯಾನೆ ಹಾಲೇಶಪ್ಪ ರಸ್ತೆ | | |
| 1 | ಎ) ಗಡಿಯಾರ ಕಂಬದಿಂದ ಹಳೇ ಅಂಡರ್ ಬ್ರಿಡ್ಜ ವರೆವಿಗೆ | 14800 | 20800 |
| 2 | ಬಿ) ಹಳೇ ಅಂಡರ್ ಬ್ರಿಡ್ಜ್ ನಿಂದ ಹೊಂಡದ ರಸ್ತೆವರೆವಿಗೆ | 10700 | 15000 |
| 3 | ಚಲುವಾದಿಕೇರಿ | 4100 | 5800 |
| 4 | ಹೊಂಡದ ರಸ್ತೆ – ರೈಲ್ವೇಗೇಟ್ ನಿಂದ ಹೊಂಡದ ಸರ್ಕಲ್ ರಸ್ತೆವರೆವಿಗೆ | 7000 | 9800 |
| 5 | ಹೊಂಡದ ರಸ್ತೆ –ಹೊಂಡದ ಸರ್ಕಲ್ ಯಿಂದ ಶಿವಾಲಿ ಟಾಕೀಸ್ ವರೆವಿಗೆ | 5800 | 8200 |
| 6 | ಸುರೇಶ್ ನಗರ ಯಾನೇ ಜಾಲಿನಗರ | 2300 | 3300 |
| 7 | ಮ್ಯಾಸಬೇಡರಕೇರಿ | 5000 | 7000 |
| 8 | ಒಕ್ಕಲಿಗರ ಪೇಟೆ (ಸಿ) | 7600 | 10700 |
| 9 | ಒಳಭಾಗ (ಆರ್) | 4300 | 6100 |
| 10 | ಮೈಸೂರು ಮಠದ ಖಣ, ಬಾರ್ ಲೈನ್ ರೋಡು ಹಿಂಭಾಗ | 2500 | 3500 |
| 11 | ಕಾಯಿಪೇಟೆ (ಸಿ) | 10500 | 14700 |
| 12 | ಒಳಭಾಗ (ಆರ್) ಕನ್ಸ್ ರ್ ವೆನ್ಸಿ ಡೋರ್ ನಂಬರ್ | 9300 | 13100 |
| 13 | ದೊಡ್ಡಪೇಟೆ ಎ) ಮೇನ್ ರಸ್ತೆ (ಸಿ) | 8300 | 11700 |
| 14 | ಬಿ) ಒಳಭಾಗ (ಆರ್) ಕನ್ಸ್ ರ್ ವೆನ್ಸಿ ಡೋರ್ | 7100 | 10000 |
| 15 | ಸ್ವಾಗೇರ್ ಪೇಟೆ (ಬಸವೇಶ್ವರ ದೇವಸ್ಥಾನದ ಹಿಂಭಾಗ) | 4100 | 5800 |
| 16 | ಕೃಷ್ಣಭವಾನಿ ಗುಡಿಗಲ್ಲಿ | 2600 | 3700 |
| 17 | ಸ್ಟೇಷನ್ ರಸ್ತೆ | 22000 | 30800 |

| ಕ್ರ. ಸಂ. | ಪ್ರದೇಶದ ಹೆಸರು | ಪರಿಷ್ಕೃತ ದರ | ಪರಿಷ್ಕೃತ ದರ |
|---|---|---|---|
| | | ವಾಸ | ವಾಣಿಜ್ಯ |
| | | ಚ ಮೀ ರೂ.ಗಳಲ್ಲಿ | ಚ ಮೀ ರೂ.ಗಳಲ್ಲಿ |
| 1 | 2 | 3 | 4 |
| 18 | ವಿಜಯಲಕ್ಷ್ಮಿ ರಸ್ತೆ | 19800 | 27800 |
| | ದೇವರಾಜ್ ಅರಸ್ ಬಡಾವಣೆ | | |
| 19 | ಎ ಬ್ಲಾಕ್ | 5200 | 7300 |
| 20 | ಬಿ ಬ್ಲಾಕ್ | 4200 | 5900 |
| 21 | ಸಿ ಬ್ಲಾಕ್ | 3500 | 4900 |
| 22 | ಇ ಡಬ್ಲ್ಯೂ ಎಸ್ ಎನ್ ಬ್ಲಾಕ್ | 3200 | 4500 |
| 23 | ಶಂಕರ್ ವಿಹಾರ ಬಡಾವಣೆ ಪಿ.ಬಿ. ರಸ್ತೆಗೆ ಲಗತ್ತು | 8900 | 12500 |
| 24 | ಶಂಕರ್ ವಿಹಾರ ಬಡಾವಣೆ ಉಳಿದ ಭಾಗ | 7100 | 10000 |
| 25 | ಕಾಡಪ್ಪನ ಖಣ | 2300 | 3300 |
| 26 | ಹೊಳೆಹೊನ್ನೂರು ತೋಟ (ಪಿ.ಬಿ. ರೋಡಿಗೆ ಲಗತ್ತು) | 19000 | 26600 |
| 27 | ಹೊಳೆಹೊನ್ನೂರು ತೋಟ (ಒಳಭಾಗ) | 12600 | 17700 |
| 28 | ಬಾಳೆ ಹೊಲದ ಸಿದ್ದಲಿಂಗಪ್ಪ ರಸ್ತೆ | 2800 | 4000 |
| 29 | ಚಿತ್ರಗಾರಗಲ್ಲಿ | 3800 | 5400 |
| | **ಎರಡನೇ ವಾರ್ಡು ಎರಡನೇ ಡಿವಿಜನ್** | | |
| 30 | ದುಗ್ಗಮ್ಮನ ಪೇಟೆ | 3500 | 4900 |
| 31 | ಶಿವಾಜಿನಗರ | 3500 | 4900 |
| 32 | ಹಳೇಪೇಟೆ | 3800 | 5400 |
| 33 | ಆನೇಕೊಂಡ ಪೇಟೆ | 3800 | 5400 |
| 34 | ಹಗೇದಿಬ್ಬ ಸರ್ಕಲ್ | 4000 | 5600 |
| 35 | ದಿಳ್ಳೆಪ್ಪನ ಗಲ್ಲಿ | 3300 | 4700 |
| 36 | ಕುಂಬಾರ ಪೇಟೆ | 3200 | 4500 |
| 37 | ಕುರುಬರ ಕೇರಿ | 2900 | 4100 |

| ಕ್ರ. ಸಂ. | ಪ್ರದೇಶದ ಹೆಸರು | ಪರಿಷ್ಕೃತ ದರ<br>ವಾಸ<br>ಚ ಮೀ ರೂ.ಗಳಲ್ಲಿ | ಪರಿಷ್ಕೃತ ದರ<br>ವಾಣಿಜ್ಯ<br>ಚ ಮೀ ರೂ.ಗಳಲ್ಲಿ |
|---|---|---|---|
| 1 | 2 | **3** | **4** |
| 38 | ತಳವಾರ ಕೇರಿ | 2900 | 4100 |
| 39 | ದೇವಾಂಗ ಪೇಟೆ | 3500 | 4900 |
| 40 | ಕನ್ನಿಕಾ ಪರಮೇಶ್ವರಿ ರಸ್ತೆ | 4900 | 6900 |
| 41 | ಗಣೇಶ್ ಪೇಟೆ ಯಾನೆ ತಿರುಕಪ್ಪನ ಮಠದ ಗಲ್ಲಿ | 4700 | 6600 |
| 42 | ಸುಲ್ತಾನ್ ಪೇಟೆ | 3500 | 4900 |
| 43 | ದಾವಲ್ ಪೇಟೆ | 3500 | 4900 |
| 44 | ಹಳೇ ಪಿಂಜಾರ ಗಲ್ಲಿ (ಕನ್ನಿಕಾ ಪರಮೇಶ್ವರಿ ದೇವಸ್ಥಾನದ ಹಿಂಭಾಗ) | 3300 | 4700 |
| 45 | ಬೂದಾಳ್ ರಸ್ತೆ | 1800 | 2600 |
| 46 | ಕೊಂಡಜ್ಜಿ ರಸ್ತೆ (ಉತ್ತರ ಭಾಗ ಮತ್ತು ದಕ್ಷಿಣ ಭಾಗ) | 2500 | 3500 |
| 47 | ತ್ಯಾಪೇರಗಲ್ಲಿ (ಭರ್ಮೋಜಿಗಲ್ಲಿ) | 2900 | 4100 |
| 48 | ಸಿದ್ದಣ್ಣನಗಲ್ಲಿ | 2500 | 3500 |
| 49 | ಕಾಳಿಕಾದೇವಿ ರಸ್ತೆ : ಎ) ಚೌಕಿಪೇಟೆಯಿಂದ ಕಾಳಿಕಾದೇವಿ ಗುಡಿವರೆಗೆ (ಸಿ) | 11800 | 16600 |
| 50 | ಬಿ) ಕಾಳಿಕಾದೇವಿ ಗುಡಿಯಿಂದ ಹಗೇದಿಬ್ಬ ಸರ್ಕಲ್ ವರೆಗೆ | 5300 | 7500 |
| 51 | ಖಂಡೆಪ್ಪನಗಲ್ಲಿ | 2900 | 4100 |
| 52 | ಕಳಸಪ್ಪನ ಗಲ್ಲಿ | 2900 | 4100 |
| 53 | ಪಿಸಾಳೆ ಗಲ್ಲಿ | 2900 | 4100 |
| 54 | ಅಗಸರ ಗಲ್ಲಿ | 2900 | 4100 |
| 55 | ಆನೆಪ್ಪ ಗಲ್ಲಿ (ಕೇರಿ) | 2600 | 3700 |
| 56 | ಇಜಾರ್ ದಾರ್ ಗಲ್ಲಿ | 3000 | 4200 |
| 57 | ಚಂದ್ರಮೌಳೇಶ್ವರ ದೇವಸ್ಥಾನದ ರಸ್ತೆ | 2400 | 3400 |
| 58 | ತಿರುಕಪ್ಪನ ಗಲ್ಲಿ (ಮಠದ ಗಲ್ಲಿ) | 4600 | 6500 |
| 59 | ಕಸಾಯಿ ಕೇರಿ | 2100 | 3000 |

